# ಅವತಾರಿಕೆ

'ಚಾರ್ಲ್ಸ್ ಕಿಂಗ್ಸ್ಲಿ' ಎಂಬ ಆಂಗ್ಲ ಗ್ರಂಥಕಾರನು ಬರೆದಿರುವ 'ಆರ್ಗೊನಾಟ್ಸ್' ಎಂಬ ಯವನಪುರಾಣದ ಕಥೆಯೇ ಇದಕ್ಕೆ ಮಾತೃಕೆಯು. ದೇಶಕ್ಕೂ ಭಾಷೆಗೂ ಸರಿಬೀಳುವಂತೆ ಹೆಸರುಗಳನ್ನೂ ವಿಷಯಗಳನ್ನೂ ಹಲವೆಡೆಗಳಲ್ಲಿ ಮಾರ್ಪಡಿಸಿರುತ್ತದೆ. ಅನ್ವರ್ಥವಾದ ಹೆಸರುಗಳು ಇದರಲ್ಲಿ ಹೇರಳವಾಗಿವೆ. ಮಾತೃಕೆಯನ್ನು ಓದಿರುವ ರಸಿಕರಿಗೆ ಇದು ರಂಜಿಸದಿರದು.

ಮಕ್ಕಳ ಅವಗಾಹನೆಗೆ ತಕ್ಕಂತೆ ಸರಳವಾಗಿ ಬರೆದಿರುವ ಈ ಗ್ರಂಥವು—ಇದಕ್ಕೆ ಮೊದಲೆ ಪ್ರಕಾಶಿತವಾಗಿರುವ, ಇದೇ ರೀತಿಯ, 'ಯಶೋಧರ' 'ಅಜಿತಕುಮಾರ'ಗಳೆಂಬ ಹೆಸರಿನ ಗ್ರಂಥಗಳಂತೆ—ಪಠನೀಯವಾಗಿ ಪರಿಣಮಿಸದೆ ಇರದೆಂಬ ನಂಬುಗೆಯಿದೆ.

ಅಂಗಿರಸ್ಸಂವತ್ಸರ<br>
ಚೈತ್ರ ಪೂರ್ಣಿಮಾ

**ಕೆ. ಬಿ. ರಾಮಕೃಷ್ಣ**

# ಹೊಂದೊವಲ ಹಂಬಲು



## I

ಹಲವು ಕಾಲಕ್ಕೆ ಹಿಂದೆ ಕಿಂಪುರುಷಖಂಡದಲ್ಲಿ ಧೂಮ್ರಲೋಚನನೆಂಬ ರಾಜನಿದ್ದನು. ಆತನಾಳುತಿದ್ದ ದೇಶಕ್ಕೆ ಯವನ ದೇಶವೆಂಬ ಹೆಸರು. ಆತನಿಗೆ ಕಾದಂಬಿನೀ ಮತ್ತು ಜ್ವಾಲೆ ಎಂಬ ಇಬ್ಬರು ಹೆಂಡಂದಿರಿದ್ದರು. ಮೊದಲಿನಾಕೆಗೆ ಜೀಮೂತನೆಂದೂ ಸೌದಾಮಿನಿಯೆಂದೂ ಇಬ್ಬರು ಮಕ್ಕಳು ಹುಟ್ಟಿದರು. ಎರಡನೆಯವಳಿಗೂ ಇಬ್ಬರು ಮಕ್ಕಳಿದ್ದರು. ಅವರ ಹೆಸರು ಎಂದೊ ಅಳಿದು ಹೋಗಿದೆ.

ಒಂದು ಕಾಲ ಊರಿಗೆಲ್ಲ ಬರ ಬಂತು. ಬಾವಿ ಬರಿದಾಯಿತು; ಕೆರೆ ಕಿರಿದಾಯಿತು; ಹೊಳೆ ಪೊರಗಾಯಿತು! ಪೊಲಗಳೆಲ್ಲವೂ ಹುರಿದಿಟ್ಟಂತಾದುವು. ಮರಗಳಲ್ಲಿ ಹಣ್ಣುಗಳಿಲ್ಲ; ಗಿಡಗಳಲ್ಲಿ ಹೂಗಳಿಲ್ಲ. ಜನರಿಗೆ ಅನ್ನ ಪಾನಕ್ಕೆ ತೀರ ಅಭಾವ ಬಂದು ಹೋಯಿತು! ಇಂತಹ ದುರ್ದಶೆಯನ್ನು ಹೇಗೆ ನೀಗಬೇಕೆಂದು ರಾಜನಿಗೆ ತೋಚಲಿಲ್ಲ. ಕೇವಲ ಚಿಂತಾಪರನಾಗಿ ಹೋದನು.

ದೊರೆಯ ಅಚ್ಚುಮೆಚ್ಚಿನ ಮಡದಿಯಾದ ಜ್ವಾಲೆಯು ತುಂಬ ಸ್ವಾರ್ಥಪರೆ. ಹಿರಿಪೆಂಡತಿಯ ಮಕ್ಕಳಿಗೆ ದೊರೆತನವು ಬರುವುದಲ್ಲದೆ, ಕಿರಿಹೆಂಡತಿಯಾದ ತನ್ನ ಮಕ್ಕಳಿಗೆ ಎಂದೂ ಬಾರದೆಂದು ಆಕೆಯ ಹೊಟ್ಟೆಯೊಳಗೆ ಕಿಚ್ಚು ಉರಿಯುತ್ತಲಿತ್ತು. ಆದುದರಿಂದ ಆಕೆಯು ನೆಟ್ಟನೆ ರಾಜನ ಬಳಿಗೆ ಹೋಗಿ— 'ದೊರೆಯೆ! ಕೊರಗುವುದೇಕೆ? ಬರವನ್ನು ಹೋಗಾಡಿಸುವ ಯತ್ನ ಮಾಡಿದರಾಗದೆ?' ಎಂದಳು.

**ದೊರೆಯು**—'ಜ್ವಾಲೆ! ನಾನೂ ಅದನ್ನೆ ಯೋಚಿಸುತ್ತಲಿದ್ದೇನೆ. ಆದರೆ ಏನೊಂದು ಹಾದಿಯೂ ತೋಚಲೊಲ್ಲದು ನೋಡು!'

**ಜ್ವಾಲೆ**—'ಇಷ್ಟೇತಕ್ಕೆ ಯೋಚನೆ ಅದಕ್ಕೆ? ಇದೆಲ್ಲವೂ ಆ ಸೊಟ್ಟ ಕಾದಂಬಿನಿಯ ದೆಸೆಯಿಂದಲೆ ಪ್ರಾಪ್ತವಾಯಿತು! ತಂದೆಯ ಮಾತಿಗೆ ಮಾನ ಕೊಡದೆ, ಅಮರನನ್ನೊಲ್ಲದೆ ಮಾನವನಿಗೆ ಮಾಲೆ ಹಾಕಿದಳಲ್ಲವೆ? ಇದರಿಂದ

ಮೇಘರಾಜನಿಗೆ ಎಂತಹ ರೋಷವು ಉತ್ಪನ್ನವಾಗಿರ ಬಹುದು! ಆದುದರಿಂದ 'ಕಾದಂಬಿನಿಯು ಕಾಲಿಟ್ಟೆಡೆ ಕಾಳಾಗಲಿ!' ಎಂದು ಶಪಿಸಿದನಂತೆ. ಈ ಶಾಪವೆ ನಮ್ಮೂರಿನ ಬರಕ್ಕೆ ಕಾರಣ!'

**ದೊರೆ**—'ಅದನ್ನು ನಾನು ಬಲ್ಲೆ! ಈಗಲಾ ಮೇಘರಾಜನನ್ನು ಹೇಗೆ ಸಮಾಧಾನಗೊಳಿಸಲೆಂಬುದೆ ಚಿಂತೆ'.

**ಜ್ವಾಲೆ**—'ಬರಿದೆ ಚಿಂತಿಸುವುದರಿಂದ ಆಗುವುದಾದರೂ ಏನು? ಶಾಂತಿಯು ಹಂಚಿಕೆಯನ್ನೇನಾದರೂ ಹೂಡಬೇಕು!'

**ದೊರೆ**—'ನೀನೆ ಒಂದು ಹಂಚಿಕೆಯನ್ನು ಹೇಳಿಕೊಡು ನೋಡೋಣ'.

**ಜ್ವಾಲೆ**—'ಹಾಗಾದರೆ ಕೇಳೋಣಾಗಲಿ. ಅಡ್ಡ ಹಾದಿಗೆ ಅಲೆದಿದ್ದ ಕಾದಂಬಿನಿಯನ್ನು ಮೇಘರಾಜನು ಆಗಲೆ ಕರೆಸಿಕೊಂಡಿರುವನು. ಈಗ ಆಕೆಯ ಮಕ್ಕಳಿಬ್ಬರು ಇರುವರಷ್ಟೆ? ಅವರನ್ನು ಆತನಿಗೆ ಬಲಿಯಾಗಿ ಅರ್ಪಿಸಿದರೆ ಎಲ್ಲವೂ ಸರಿ ಬರುವುದು!'

**ದೊರೆ**—'ಆದರೆ ಈ ಬಲಿಗೆ ಮೇಘನು ಒಲಿದಾನೆಂಬುದು ಹೇಗೆ ನಿಶ್ಚಯ?

**ಜ್ವಾಲೆ**—'ಸಂದೇಹವೆಲ್ಲಿಂದ ಬಂತು? ದೇವತೆಗಳ ವಾಣಿಯೆ ಹಾಗಿರುವುದು!'

**ದೊರೆ**—'ಹಾಗಿದ್ದರೆ ನಾಳೆಯೆ ಆಗಿ ಹೋಗಲಿ!'

**ಜ್ವಾಲೆ**—'ನಿಜ ನಿಜ! ಸಾವಕಾಶದಿಂದ ಫಲವಿಲ್ಲ!'

ಕಠೋರ ಹೃದಯೆಯಾದ ಜ್ವಾಲೆಯು ಈ ರೀತಿಯಾಗಿ ರಾಜನನ್ನು ಮರುಳು ಮಾಡಿ, ತನ್ನ ಮನದ ಬಯಕೆಯನ್ನು ಸಲಿಸಿಕೊಂಡಳು. ರಾಜನಾದರೊ, ರಾಣಿಯು ಸರಳೆಯೆಂದೆ ನಂಬಿಕೊಂಡಿದ್ದುದರಿಂದ, ಆಕೆಯ ಬಲೆಯೊಳಗೆ ಸುಲಭವಾಗಿ ಬಿದ್ದು ಬಿಟ್ಟನು. ಈ ಹೊಲೆಗೆಲಸಕ್ಕೆ ಮನಸ್ಸು ಮಾಡಿದನು!

ಮರುದಿನ ಬಲಿಗೊಡುವುದಕ್ಕೆ ಅಣಿ ಮಾಡಿದರು. ರಾಜನೂ ರಾಣಿಯೂ ಪರಿವಾರದವರೂ ಎಲ್ಲರೂ ಬಂದು ನೆರೆದರು. ಕಾದಂಬಿನಿಯ ಮಕ್ಕಳನ್ನು ಬಲಿಗಂಬದ ಬಳಿ ತಂದು ನಿಲಿಸಿದರು. ಆ ಮಕ್ಕಳಿಗೆ ಇದೊಂದೂ ತಿಳಿಯದು. ಬೆರಗಾಗಿ ಅತ್ತಿತ್ತ ನೋಡುತಿದ್ದರು. ಸರಿಯಾದ ಹೊತ್ತು ಬಂತು.

ಪುರೋಹಿತನು ಕೊಲೆಗಡಿಗನಂತೆ ಕತ್ತಿಯನ್ನು ಹಿರಿದು ಹತ್ತಿರ ಬಂದು ನಿಂತನು. ಅಷ್ಟರಲ್ಲಿ ಅಂಬರದಿಂದ ಹೊಂಬಣ್ಣದ ತಗರೊಂದು ಇಳಿದು ಕೊಂಡು ಬಂದು, ಆ ಮಕ್ಕಳಿಬ್ಬರನ್ನೂ ತನ್ನ ಬೆನ್ನ ಮೇಲೇರಿಸಿಕೊಂಡು, ಎತ್ತಲೋ ಮಾಯವಾಗಿ ಬಿಟ್ಟಿತು!

ಈಗಲೀಗ ಧೂಮ್ರಲೋಚನನಿಗೆ ಅರಿವು ಬಂತು. ಜ್ವಾಲೆಯಾಡಿದ ನುಡಿಗಳು ಸಟೆಯೆಂತಲೂ, ಮೇಘರಾಜನು ಮುನಿದಿಲ್ಲವೆಂತಲೂ, ಈ ಬಲಿ ಯನ್ನು ಜ್ವಾಲೆಯೆ ಬಯಸಿದಳಲ್ಲದೆ ತನ್ನ ಮಾವನು ಬಯಸಿಲ್ಲವೆಂತಲೂ, ಈಗ ವಿಶದವಾಯಿತು! ಸಿಟ್ಟಿನಿಂದ ಕಿಡಿಕಿಡಿಯಾದನು! ಬಳಿಯಲ್ಲಿ ನಿಂತಿದ್ದ ಜ್ವಾಲೆಯ ಮಗುವೊಂದನ್ನು ಎಳೆದು ತಂದು ಬಲಿಗೊಟ್ಟನು! ಇದನ್ನು ಕಂಡು ಜ್ವಾಲೆಯು, ತನ್ನ ಉಳಿದೊಂದು ಮಗುವನ್ನು ಕಂಕುಳಲ್ಲೆತ್ತಿಕೊಂಡು, ಓಡ ತೊಡಗಿದಳು. ಧೂಮ್ರಲೋಚನನು ಆಕೆಯನ್ನು ಬೆರಸಿಕೊಂಡು ಹೋದನು. ಇಬ್ಬರೂ ಕಡಲ ತಡಿಯನ್ನು ಸೇರಿದರು. ಜ್ವಾಲೆಯು ಮುಂದುಗಾಣದೆ ನೀರಿನೊಳಗೆ ಹಾರಿಕೊಂಡಳು. ಆ ಮೇಲೆ ಅವಳ ಗತಿ ಯೇನಾಯಿತೊ ಯಾರೂ ಅರಿಯರು. ಆದರೆ ಅವಳ ಹೊಟ್ಟೆಯೊಳಗಣ ಕಿಚ್ಚು ಮಾತ್ರ ಆಗಾಗ ಪ್ರಬಲಿಸಿ, ಸಿಕ್ಕಿಸಿಕ್ಕಿದ ಬಂಡೆಗಳನ್ನೂ ಹೆಂಡೆಗಳನ್ನೂ ಕರಗಿಸಿಕೊಂಡು ಹೊರಕ್ಕೆ ಉಕ್ಕಿ ಬಂದು, ಅಲ್ಲಲ್ಲಿ ಹಾವಳಿ ಮಾಡುವುದನ್ನು ಇಂದಿಗೂ ಬಿಡಲಿಲ್ಲವಂತೆ!

ಇತ್ತ ಧೂಮ್ರಲೋಚನನು ಹತಾಶನಾಗಿ ಹಿಂದೆರಳಿದನು. ನಾಗರಿಕರು ಈತನು ಮಾಡಿದ ಬಾಲವಧವನ್ನು ಎಣಿಸಿಕೊಂಡು ರೇಗಿಬಿದ್ದು, ಇಂತಹ ನಿರ್ದಯನನ್ನು ತಾವೊಲ್ಲೆವೆಂದು ಊರಿಂದ ಅಟ್ಟಿಬಿಟ್ಟರು. ದುರ್ದೈವಿ ಯಾದ ಈ ದೊರೆಯು ನಾಡಿಂದ ನಾಡಿಗೂ ಕಾಡಿಂದ ಕಾಡಿಗೂ ಅಲೆದಲೆದು, ಕೊನೆಗೆ ವಾಣೀವಿಲಾಸಕ್ಕೆ ಬಂದನು.

ವಾಣೀವಿಲಾಸವೆಂಬುದು ಯೋಜನದಗಲ ಹರಡಿಕೊಂಡಿರುವ ದೊಡ್ಡ ದೊಂದು ವಟವೃಕ್ಷದ ಹೆಸರು. ಈ ವೃಕ್ಷಕ್ಕೆ ಹಿಂದು ಮುಂದಿನ ವಿಚಾರ ವನ್ನು ತಿಳಿದು ನುಡಿಯುವಷ್ಟು ದೈವಿಕ ಶಕ್ತಿ ಇತ್ತಂತೆ! ಅಂತಹ ವೃಕ್ಷದ ಬುಡಕ್ಕೆ ಬಂದು, ಅದರ ಮುಂದೆ ತನ್ನ ಹಂಬಲನ್ನು ಹೇಳಿಕೊಂಡು, ಸಲಹೆ ಕೇಳಿದನು. 'ರಾಜನೆ! ತೀರ್ಥಯಾತ್ರೆಯಿಂದಲ್ಲದೆ ಬಾಲವಧವು ಪರಿಹಾರ

ವಾಗದು! ಎಂದಿಗೆ ವನ್ಯಪಶುಗಳು ಉಣಬಡಿಸುವವೊ ಅಂದಿಗೆ ಮುಕ್ತಿಯೆಂದು ತಿಳಿ!' ಎಂದು ವಟವಾಣಿಯಾಯಿತು.

ಧೂಮ್ರಲೋಚನನು ದೇಶಾಟನೆಗೆ ತೊಡಗಿದನು. ಹಗಲಿರುಳೆನ್ನದೆ ಸಂಚಾರ ಮಾಡಿದನು. ಹೋಗಲು ಹಾದಿಯಿಲ್ಲ; ಉಣಲು ಊಟವಿಲ್ಲ; ಕುಡಿಯಲು ನೀರಿಲ್ಲ; ಮಲಗಲು ಮನೆಯಿಲ್ಲ! ಈ ಪರಿ ಸಂಕಟಗಳನ್ನು ಸಹಿಸಿ ಕೊಂಡು ಎಷ್ಟೋ ಪವಿತ್ರ ಸ್ಥಳಗಳ ದರ್ಶನ ಮಾಡಿದನು. ಕೊನೆಗೊಂದು ದಿನ ಆತನು ಹಿಡಿದ ಹಾದಿಯು ಒಂದು ಗೊಂಡಾರಣ್ಯಕ್ಕೆ ತಂದಿಳಿಸಿತು. ಮೂರು ದಿನಗಳು ಕಳೆದರೂ ನಾಡಿನ ಸುಳಿವಿಲ್ಲ. ಹಸಿವು ನೀರಡಿಕೆಗಳಿಂದ ತೀರ ಕಂಗೆಟ್ಟು ಹೋದನು. ಅಷ್ಟರಲ್ಲಿ ಕೆಲವು ತೋಳಗಳ ಗುಂಪೊಂದು ಗೋಚರವಾಯಿತು. ಆ ತೋಳಗಳು ಈ ರಾಜನನ್ನು ಕಾಣುತ್ತಲೆ ದಿಕ್ಕು ಪಾಲಾಗಿ ಕಣ್ಮರೆಯಾದುವು. ದೊರೆಯು ಹತ್ತಿರ ಹೋಗಿ ನೋಡುತ್ತಾನೆ! ಅರ್ಧ ತಿಂದುಳಿದ ಕುರಿಯೊಂದು ಅಲ್ಲಿ ಬಿದ್ದಿತ್ತು. ಇದು ದೈವ ಚಿಂತನೆ ಯಿಂದಲೆ ತನಗೆ ದೊರೆತಿರ ಬೇಕೆಂದೆಣಿಸಿ, ಆ ಹಸಿಮಾಂಸವನ್ನು ನುಂಗಿದನು. ಕೂಡಲೇ ಆತನಿಗೆ ವಟವಾಣಿಯು ನೆನಪಾಯಿತು. ಅಂದಿಗೆ ತನ್ನ ಶಾಪ ಪರಿಹಾರವಾಯಿತೆಂದೆಣಿಸಿ ಹಿಗ್ಗಿಕೊಂಡನು.

ಅಲ್ಲಿಂದ ಮುಂದೆ ಒಪ್ಪೊತ್ತಿನ ಹಾದಿ ಸಾಗುತ್ತಲೆ ಆತನಿಗೆ ಚಿಕ್ಕದೊಂದು ನಗರವು ಕಾಣಿಸಿತು. ಅಲ್ಲಿಗೆ ಹೋಗಿ ತಾನು ಯಾರೆಂಬುದನ್ನು ತಿಳಿಸಿ, ಜನರ ಮನಸ್ಸನ್ನು ಒಲಿಸಿ, ತಾನು ಅವರಿಗೆ ರಾಜನಾದನು. ಕ್ರಮೇಣ ಸುತ್ತುಮುತ್ತಿನ ಊರುಗಳನ್ನು ವಶಪಡಿಸಿಕೊಂಡು, ಧೂಮ್ರಲೋಚನನು ಮೊದಲಿನಂತೆಯೆ ಪ್ರಬಲನಾದ ರಾಜನೆಂದು ಹೆಸರುಗೊಂಡನು.

ಇತ್ತ ಕಾದಂಬಿನಿಯ ಮಕ್ಕಳೇನಾದರು? ಆ ಹೊಂದಗರು ಅವರನ್ನೆತ್ತಿ ಕೊಂಡು ವಾಯುಮಾರ್ಗವಾಗಿ ಎತ್ತಲೋ ಹಾರಿಕೊಂಡು ಹೋಗಿ ಬಿಟ್ಟಿತು. ಬಲು ದೂರ ಹೋದನಂತರ ಭೀತಿಯಿಂದಲೂ ಆಯಾಸದಿಂದಲೂ ಸೌದಾಮಿ ನಿಗೆ ಕಣ್ಣು ಕತ್ತಲೆ ಬಂತು. ಒಂದೆಡೆ ಸಮುದ್ರಕ್ಕೆ ಬಿದ್ದು ಬಿಟ್ಟಳು. ಮತ್ತೇ ನಾದಳೊ ಯಾರೂ ಅರಿಯರು. ಜೀಮೂತನಾದರೊ ತಗರಿನ ಕೊರಳನ್ನು ಬಲವಾಗಿ ಅವುಕಿ ಹಿಡಿದುಕೊಂಡನು. ತಗರು ವಾಯುವೇಗದಿಂದ ಸಾಗು ತಲಿತ್ತು. ಕೊನೆಗೆ ಪ್ರಭಾಮಂಡಲವೆಂಬ ದೇಶಕ್ಕೆ ಬಂದಿಳಿಯಿತು.

ಪ್ರಭಾಮಂಡಲವನ್ನು ಮಿತ್ರಾವಸುವೆಂಬ ರಾಜನು ಆಳುತ್ತಿದ್ದನು. ಈ ಕುಂದಣದ ತಗರನ್ನೂ ಸುಂದರ ಬಾಲಕನನ್ನೂ ಕಂಡು, ಆತನು ಸಂತಸದಿಂದ ತನ್ನ ಪದರಿನಲ್ಲಿ ಹಾಕಿಕೊಂಡನು. ಕಾಲಾನುಭಾಗದಲ್ಲಿ ಬಾಲಕನು ತರುಣ ನಾದನು. ಜೀಮೂತನು ಮಿತ್ರಾವಸುವಿನ ಮಗಳಾದ ಪ್ರಭಾವತಿಯನ್ನು ಮದುವೆಯಾದನು. ಈ ಸಮಾರಂಭದಲ್ಲಿ ಆ ಪೊಂದಗರನ್ನು ದೇವತೆಗಳಿಗೆ ಬಲಿಗೊಟ್ಟರು. ಮಿತ್ರಾವಸುವು ಅದರ ತೊಗಲನ್ನು ಸುಲಿಸಿ, ರಣದೇವನ ಕಣದೊಳಗಿನ ಒಂದು ಆಲದ ಮರಕ್ಕೆ ನೇಲಿಸಿ ಬಿಟ್ಟನು.

ಕ್ರಮೇಣ ಪ್ರಭಾವತಿಯು ಬಸುರಿಯಾದಳು. ತಿಂಗಳು ತುಂಬುತ್ತಲೆ ಒಂದು ಗಂಡು ಕೂಸನ್ನು ಪಡೆದಳು. ಆ ಕೂಸಿಗೆ ಲೋಹಾಂಗನೆಂದು ಹೆಸರಿಟ್ಟರು. ಅಷ್ಟರಲ್ಲಿ ಜೀಮೂತನು ಕಾಲವಶನಾದನು. ತಾರುಣ್ಯ ದಲ್ಲಿಯೆ ಇಂತಹ ದುಸ್ಸಂಧಿಯು ಬಂದುದರಿಂದ ಎಲ್ಲರೂ ಮರುಗಿದರು. ಇದ್ದವರಂತೂ ಇರಲಿ! ಸತ್ತವನೂ ಮರುಗಿದನಂತೆ! ಯಾಕೆಂದರೆ ಜೀಮೂತನು ಹುಟ್ಟಿದ ಊರಿಗೂ ಸತ್ತ ಊರಿಗೂ ಅಂತರ ಬಹಳವಿದ್ದುದರಿಂದ, ಆತನ ಆತ್ಮಕ್ಕೆ ಶಾಂತಿ ದೊರಕಲಿಲ್ಲವಂತೆ. ಆದುದರಿಂದ ಯುವನ ವೀರರಿಗೆ ಆಗಾಗ ಕನಸಿನಲ್ಲಿ ಕಾಣಿಸಿಕೊಂಡು,—'ಬನ್ನಿರಿ! ನನ್ನನ್ನು ಬಿಡಿಸಿಕೊಳ್ಳಿರಿ! ನನ್ನ ತಾತಂದಿರ ಬಳಿಗೆ ನಾನೂ ಬರುವೆನಂತೆ!'—ಎಂದು ಮರುಗುತ್ತಲಿದ್ದನಂತೆ!

ಆಗಲಾ ವೀರರು—'ಅಯ್ಯಾ, ಜೀಮೂತ! ನಿನ್ನ ಬಂಧನವನ್ನು ನಾವು ಹೇಗೆ ಬಿಡಿಸಲಿ?' ಎಂದುಕೊಳ್ಳುವರು.

'ಹಡಗು ಕಟ್ಟಿಕೊಂಡು ಪ್ರಭಾಮಂಡಲಕ್ಕೆ ಹೋಗಬೇಕು. ಅಲ್ಲಿ ಹೊಂದಗರಿನ ತೊಗಲಿದೆ. ಅದರೊಳಗೆ ನನ್ನ ಆತ್ಮವಿರುವುದು. ಆ ಹೊಂದೊಗಲನ್ನು ತಂದಿರೆಂದರೆ ನನಗೆ ಶಾಂತಿ ಬರುವುದು!'—ಎಂದು ಹೇಳು ವನಂತೆ.

ಆದರೆ ಪ್ರಭಾಮಂಡಲಕ್ಕೆ ಹೋಗತಕ್ಕ ವೀರನಾರು? ಹೋದರೂ ಸೂರ್ಯವಂಶದ ಮಿತ್ರಾವಸುವನ್ನು ಜಯಿಸುವನಾರು? ಜಯಿಸಿದರೂ ಆ ಹೊಂದೊಗಲು ದೊರಕುವ ಬಗೆ ಹೇಗೆ? ಈ ವಿಚಾರಗಳಿಂದ ಎಲ್ಲರೂ ಚಿಂತೆಗೆ ಈಡಾಗಿ ಹೋದರು. ಯಾವುದಕ್ಕೂ ಕಾಲ ಬರಲಿಲ್ಲ. ಆಗುವ ಕಾಲಕ್ಕೆ ಆದೀತು.

## II

ಜೀವಮೂತನಿಗೆ ದೂರಬಂಧುವಾದ ರತ್ನಾಕರನು ಇಳಾವರ್ತದಲ್ಲಿ ಆಳಿಕೊಂಡಿದ್ದನು. ಆತನ ಮಲತಾಯ ಮಗನಾದ ಸೈಂಧವನು ಕ್ರೂರಮನಸ್ಸಿನವನು. ಆತನ ವಿಷಯ ಜನರು ಬಗೆಬಗೆಯಾಗಿ ಆಡಿಕೊಳ್ಳುತ್ತಾರೆ. ಆತನನ್ನು ಹಡೆದ ಅಪ್ಸರೆಯು ಶಿಶುವನ್ನು ಬೆಟ್ಟಗಳ ನಡುವೆ ಚೆಲ್ಲಿಕೊಟ್ಟಳಂತೆ. ಕಾಡು ಕುದುರೆಯು ಅದನ್ನು ಒದೆಯಿತು. ಈ ಒದೆಯಿಂದ ಮೈತುಂಬ ಗಾಯವಾಯಿತು. ಇಂತಹ ಅವದೆಶೆಯಲ್ಲಿದ್ದ ಈ ಶಿಶುವನ್ನು ಯಾವನೋ ಒಬ್ಬ ಕುರುಬನು ಎತ್ತಿಕೊಂಡು ಹೋಗಿ ಸಾಕಿದನಂತೆ. ಯಾರೊಂದು ಅಂಜಿಕೆಯೂ ಅಂಕೆಯೂ ಇಲ್ಲದೆ ಬೆಳೆದವನಾದುದರಿಂದ, ನ್ಯಾಯಾನ್ಯಾಯ ವಿಚಾರವಿಲ್ಲದೆ, ಹಲವು ಕ್ರೂರಕರ್ಮಗಳನ್ನು ಮಾಡಿದನು. ಕೊನೆಗೆ, ಕೇವಲ ಆಪ್ತನೆಂದೆಣಿಸದೆ, ರತ್ನಾಕರನನ್ನು ಕೂಡ ಗದ್ದುಗೆಯಿಂದ ತಳ್ಳಿ ಬಿಟ್ಟು, ತಾನೆ ಇಳಾವರ್ತಕ್ಕೆ ದೊರೆಯಾಗಿ ಮೆರೆಯ ತೊಡಗಿದನು.

ಅವಮಾನಿತನಾದ ರತ್ನಾಕರನು ತನ್ನ ಚಿಕ್ಕ ಮಗನನ್ನು ಕರೆದುಕೊಂಡು, ಸೈಂಧವನಿಗೆ ತಿಳಿಯದಂತೆ, ನಗರದಿಂದ ಹೊರಹೊರಟನು. ತನ್ನ ಮಗನು ಮುಂದೆ ರಾಜ್ಯಕ್ಕಧಿಕಾರಿಯಾಗುವುದರಿಂದ, ಸೈಂಧವನು ಈ ಬಾಲಕನನ್ನು ಕೊಲ್ಲದಿರನೆಂಬುದು ಖಂಡಿತವಾಗಿತ್ತು. ಆದುದರಿಂದ ಗಿರಿ ಗುಹೆಗಳಲ್ಲಾದರೂ ಈತನನ್ನು ಹುದುಗಿಸಿಟ್ಟು ಬದುಕಿಸ ಬೇಕೆಂದು ಆತನು ನಿಶ್ಚಯಿಸಿದನು.

ಅಪ್ಪನೂ ಮಗನೂ ಕಡಲ ತಡಿಯನ್ನು ಬಿಟ್ಟು, ಬೆಟ್ಟಗಳನ್ನು ಹತ್ತಿ, ಗಣಿಗಳನ್ನಿಳಿದು, ಹೊಳೆಗಳನ್ನು ಹಾಯ್ದು, ತೋಟಗಳನ್ನು ದಾಟಿ, ಸದಾ ಕಾಲವೂ ಹಿಮುಕವಿದು ಬಿಳುಪಾಗಿದ್ದ ಗಂಧರ್ವ ಗಿರಿಯನ್ನೇರಿದರು. ಹಳ್ಳ ವೆನ್ನದೆ ತಿಟ್ಟೆನ್ನದೆ ಕಲ್ಲೆನ್ನದೆ ಮುಳ್ಳೆನ್ನದೆ ನಡೆದುದರಿಂದ ಬಾಲಕನ ಪಾದಗಳು ದಾಸಾಳದಂತೆ ಕೆಂಪಗಾದವು. ಆ ಮೇಲೆ ರತ್ನಾಕರನು ಅವನನ್ನೆತ್ತಿಕೊಂಡು ನಡೆಯಬೇಕಾಯಿತು. ಅಷ್ಟರಲ್ಲಿ ದೊಡ್ಡದೊಂದು ಬಂಡೆಯ ಬುಡದಲ್ಲಿ ಒಂದು ಗುಹೆಯು ಕಾಣಿಸಿತು. ಆ ಗವಿಯ ಬಾಗಿಲಲ್ಲಿ ತೆರತೆರನಾದ ಹೂ ಗಿಡಗಳೂ ಬಳ್ಳಿಗಳೂ ಕ್ರಮವಾಗಿ ನಟ್ಟು ಬೆಳೆಯಿಸಿದಂತೆ ಕಾಣಿಸುತಿದ್ದವು.

ಹಿಮವು ಕರಗಿ ಬಂದ ನೀರೇ ಅವುಗಳಿಗೆ ಆಧಾರ. ಹೊರಗಿನ ಈ ಸೊಬಗೂ ವಾಸನೆಯೂ ಕಣ್ಣಿಗೂ ಮೂಗಿಗೂ ಸೊಗಸು ಬೀರುತ್ತಿರುವಷ್ಟಕ್ಕೆ, ಗವಿಯೊಳಗಿಂದ ವೀಣೆಯೊಂದಿಗೆ ದನಿಗೂಡಿಸಿ ಹಾಡುವ ಇಂಪು ಕಿವಿಗೂ ಆನಂದಜನಕವಾಯಿತು.

ರತ್ನಾಕರನು ಹುಡುಗನನ್ನು ಕೆಳಕ್ಕಿಳಿಸಿ—'ಹೋಗು, ಒಳಗೆ ಹೋಗು. ಅಂಜಬೇಡ. ಯಾರಿದ್ದರೂ ಅವರ ಕಾಲಿಗೆರಗು. ಸರ್ವೇಶ್ವರನಾದ ದೇವರ ಹೆಸರಲ್ಲಿ ನಿನ್ನನ್ನು ಪದರಿನೊಳಗೆ ಹಾಕಿಕೊಳ್ಳುವಂತೆ ಹೇಳು'—ಎಂದು ಮೆಲ್ಲಗೆ ಕಲಿಸಿಕೊಟ್ಟನು. ಹುಡುಗನಂತೂ ವೀರಪುತ್ರನಾದುದರಿಂದ ಏನೂ ಅಂಜಿಕೆಯಿಲ್ಲದೆ ಒಳಕ್ಕೆ ನಡೆದನು. ಆ ಗಾನದಲ್ಲಿ ಈತನ ಮನಸ್ಸು ಲೀನವಾಯಿತು. ಇದಿರಲ್ಲಿ ಕರಡಿಯ ತೊಗಲುಗಳ ಮೇಲೆ ಒರಗಿಕೊಂಡು ಹಾಡುತಲಿದ್ದ ಒಬ್ಬ ಗಂಧರ್ವನು ಕಾಣಿಸಿದನು. ಸೊಂಟದ ತನಕ ನರದೇಹ; ಸೊಂಟದ ಕೆಳಗೆ ಅಶ್ವದೇಹ! ಬಿಳಿಗೂದಲು ಹೆಗಲ ಮೇಲೆ ಹರಡಿತ್ತು. ಗಡ್ಡವು ಎದೆಯ ತನಕ ನಿಲುಕಿತ್ತು. ಕಣ್ಣುಗಳನ್ನೂ ಮುಂದಲೆಯನ್ನೂ ಕಂಡರೆ ಆತನು ತುಂಬ ಜ್ಞಾನಿಯೆಂಬುದು ವಿಶದವಾಗುತಲಿತ್ತು. ಇಂತಹ ವಿಚಿತ್ರ ಮೂರ್ತಿಯು ಚಿನ್ನಕೆತ್ತಿದ ವೀಣೆಯನ್ನು ಹಿಡಿದುಕೊಂಡು ತಂತಿಗಳನ್ನು ಮಿಾಟುತ್ತ, ನಿರ್ಜೀವವಾದ ಆ ಗವಿಯೊಳಗೆ ಜೀವಕಳೆಯನ್ನು ತುಂಬುತಿದ್ದನು. ಕಾಲಪ್ರಮಾಣ, ಸ್ವರ್ಗನರಕಗಳ ವಿಚಾರ, ಪಂಚತತ್ವಗಳ ಸತ್ವ, ವನಸ್ಪತಿಗಳ ಮಹಿಮೆ, ಮೃಗಭಾಷೆ, ಪೂರ್ವಾಪರ ವಿಚಾರ, ಆರೋಗ್ಯ ಶಾಸ್ತ್ರ, ರಾಜಧರ್ಮ—ಇವೇ ಮೊದಲಾದ ವಿಷಯಗಳನ್ನು ಆತನು ಹಾಡುಗಳಲ್ಲಿ ಜೋಡಿಸಿಕೊಂಡಿದ್ದನು. ಇಂತಹ ಸರಸವಾದ ಗಾನಕ್ಕೆ ಮನಸೋತು ಆ ಬಾಲಕನು ಮೈಮರೆತಿದ್ದನು.

ಕೊನೆಗೆ ಗಂಧರ್ವನು ಹಾಡನ್ನು ನಿಲ್ಲಿಸಿ, ಹುಡುಗನನ್ನು ಹತ್ತಿರಕ್ಕೆ ಕರೆದು, ನಗುತ್ತ—'ಮಗು! ನಿನ್ನ ತಂದೆ ರತ್ನಾಕರನನ್ನು ಈಚೆಗೆ ಬರಹೇಳು. ನಿಮ್ಮ ಸಂಕಟಗಳೆಲ್ಲವೂ ನನಗೆ ತಿಳಿದಿರುವುದು'—ಎಂದು ಹೇಳಿದನು.

ಹೊರಗಿದ್ದ ರತ್ನಾಕರನು ಈ ಮಾತುಗಳನ್ನು ಕೇಳಿ, ಮೊಗ ಬಾಡಿಸಿಕೊಂಡು ಮುಂದಕ್ಕೆ ಬಂದನು. ಗಂಧರ್ವನು—'ರತ್ನಾಕರಾ! ಈ ಹುಡುಗನನ್ನು ಮುಂದುಗೊಳಿಸಿ ನೀನೇಕೆ ಹಿಂದುಳಿದೆ?'—ಎಂದು ಕೇಳಿದನು.

ರತ್ನಾಕರನು—'ಬಾಲಕನ ಎಳೆಹರೆಯವನ್ನು ಕಂಡು ಅಶ್ವಪತಿಗೆ ಕನಿಕರ ಹುಟ್ಟಲಿಯೆಂದು ಹಾಗೆ ಮಾಡಿದೆನು. ವೀರಪುತ್ರನಾದ ಈತನಲ್ಲಿ ವೀರವರ್ತನೆ ಇರುವುದೊ ಇಲ್ಲವೊ ಎಂಬುದನ್ನು ಕೂಡ ಪರೀಕ್ಷಿಸಿದ ಹಾಗಾಯಿತು, ಮಹಾನುಭಾವ! ಅಶ್ವಪತಿ! ಈ ಬಾಲಕನನ್ನು ನಿನ್ನ ಪದರಿನೊಳಗಿಟ್ಟುಕೊ! ದುರ್ದಿನಗಳು ದಾಟುವಲ್ಲಿವರೆಗೆ ನಿನ್ನ ಬಳಿಯಿರಲಿ! ವೀರೋಚಿತ ವಿದ್ಯೆಗಳನ್ನು ಹೇಳಿಕೊಡುವೆಯಂತೆ! ಇಷ್ಟೊಂದು ಅನುಗ್ರಹ ಮಾಡು!' ಎಂದು ಬೇಡಿಕೊಂಡನು.

ಅಶ್ವಪತಿಯು ಬಾಲಕನನ್ನು ಹತ್ತಿರಕ್ಕೆಳೆದು, ತಲೆಯ ಮೇಲೆ ಕೈಯಾಡಿಸುತ್ತ —'ಮಗೂ! ನೀನು ನನ್ನ ಶಿಷ್ಯನಾಗುವೆಯಾ? ನನ್ನ ಕುದುರೆಗಾಲು ಕಂಡು ನಿನಗೆ ಅಂಜಿಕೆಯಾಗದೆ?'—ಎಂದು ಕೇಳಿದನು.

ಬಾಲಕನು—'ಅಷ್ಟು ಸೊಗಸಾಗಿ ಹಾಡ ಬಲ್ಲೆನಾದರೆ, ನನಗೂ ಕುದುರೆಗಾಲುಗಳು ಬರಲೊಲ್ಲವೇಕೆ?'—ಎಂದು ಮರುನುಡಿದನು.

ಅಶ್ವಪತಿಯು—'ಹಾಗಾದರೆ ನನ್ನ ಬಳಿ ಕುಳಿತುಕೊ. ಹೊತ್ತು ಕಂತುವಾಗ ನಿನ್ನ ಒಡನಾಡಿಗಳಾಗುವವರು ಬರುವರು. ಅವರಂತೆ ನೀನು ಕೂಡ ವೀರವಿದ್ಯೆಗಳನ್ನು ಕಲಿತುಕೊಳ್ಳುವೆಯಂತೆ! ಶೂರರ ರಾಜನಾಗಲು ಯೋಗ್ಯತೆ ಪಡೆಯುವೆಯಂತೆ! ಈಗ—ರತ್ನಾಕರ! ಶಾಂತನಂತೆ ಹಿಂದಕ್ಕೆ ಹೋಗು. ಗಾಳಿಯನ್ನು ಕಂಡುಕೊಂಡು ಕೊಡೆ ಹಿಡಿಯ ಬೇಕೆಂಬುದನ್ನು ಮರೆಯಬೇಡ. ನಿನ್ನ ಈ ಹುಡುಗನು ನಿಮ್ಮ ವಂಶಕ್ಕೆ ತಿಲಕಪ್ರಾಯನಾಗುವನೆಂದು ತಿಳಿ!' ಎಂದು ಹೇಳಿದನು.

ರತ್ನಾಕರನು ಅಶ್ವಪತಿಯನ್ನು ಬೀಳುಗೊಂಡನು. ಮಗನನ್ನು ಕಂಡು ಮರುಗಿದನು. ಆದರೆ ಆ ಮಗನಿಗೆ ಮಾತ್ರ ಅಳು ಬಾರದು. ಮನಸ್ಸಿನೊಳಗೆಲ್ಲ ತಾನು ಕಂಡು ಕೇಳಿದ ವಿಚಿತ್ರ ಸಂಗತಿಗಳು ತುಳುಕುತಲಿದ್ದುವು.

ರತ್ನಾಕರನು ಹೋಗುತ್ತಲೆ ಅಶ್ವಪತಿಯು ವೀಣೆಯನ್ನು ಆ ಬಾಲನ ಕೈಗೆ ಕೊಟ್ಟು, ಅದನ್ನು ನುಡಿಸುವ ವಿಧಾನವನ್ನು ಕಲಿಸತೊಡಗಿದನು. ಹೊತ್ತು ಕಂತುವಲ್ಲಿ ವರೆಗೂ ಈ ಕೆಲಸವು ನಡೆಯುತ್ತಲಿತ್ತು. ಅಷ್ಟರಲ್ಲಿ ಹೊರಗಿನಿಂದ ಗುಲ್ಲು ಕೇಳಿಸಿತು. ಅಶ್ವಪತಿಯು ಚಟಕ್ಕನೆ ಚಿಗಿದು, ತನ್ನ ಕುದುರೆಗೊರಸುಗಳಿಂದ ತಟಪಟ ಸದ್ದು ಮಾಡುತ್ತ, ಗವಿಯ ಬಾಗಿಲಿಗೆ ಬಂದನು.

ಅವನನ್ನು ಕಾಣುತ್ತಲೆ ಅಲ್ಲಿ ನಿಂತಿದ್ದ ವಜ್ರಾಂಗ, ಚಂಡಸೇನ, ಅಪರಾಜಿತ ಮೊದಲಾದ ವೀರಪುತ್ರರು ಸಂತೋಷದಿಂದ—'ಗುರುವರ್ಯ! ನಾವು ತಂದಿರುವುದು ನೋಡೋಣಾಗಲಿ!'—ಎಂದು ಕೂಗಿದರು. ಒಬ್ಬನು ತಾನೆರಡು ಎರಳೆಗಳನ್ನು ಕೊಂದಿರುವೆನೆಂದನು. ಇನ್ನೊಬ್ಬನು ತಾನೊಂದು ಕಬ್ಬೆಕ್ಕನ್ನು ತಂದಿರುವೆನೆಂದನು. ವಜ್ರಾಂಗನು ದೊಡ್ಡದೊಂದು ಹೋತ ನನ್ನು ಕೊಂಬು ಹಿಡಿದು ಎಳೆದು ತಂದನು. ಚಂಡಸೇನನು ಎರಡು ಮರಿ ಕರಡಿಗಳನ್ನು ಕಂಕುಳಲ್ಲಿರುಕಿಸಿಕೊಂಡಿದ್ದನು. ಅವು ಪರಚಿದರೂ ಆತನಿಗೆ ನೋಯುತ್ತಿರಲಿಲ್ಲ. ಅಶ್ವಪತಿಯು ಎಲ್ಲರನ್ನೂ ತಕ್ಕಂತೆ ಹೊಗಳಿದನು.

ಒಬ್ಬ ಶಿಷ್ಯನು ಮಾತ್ರ ಈ ಗುಂಪಿನೊಳಕ್ಕೆ ಸೇರದೆ ದೂರದಲ್ಲಿಯೇ ಕೀಳ್ಮೊಗನಾಗಿ ನಿಂತಿದ್ದನು. ಅವನನ್ನು ಕಂಡು ಅಶ್ವಪತಿಯು— 'ಮೇಧಾವಿ! ನೀನೇನು ತಂದಿರುವೆ?'—ಎಂದು ಕೇಳಿದನು.

ಆ ಬಾಲಕನು ಕೂಡಲೆ ಹತ್ತಿರಕ್ಕೆ ಬಂದು, ತಾನು ತಂದಿದ್ದ ಬಗೆ ಬಗೆಯ ಹೂಗಳನ್ನೂ ಬಳ್ಳಿಗಳನ್ನೂ ತೋರಿಸಿ,—'ಗುರುವರ್ಯ! ನಾನಿ ವನ್ನು ಆಯ್ದುಕೊಂಡೆನು. ಹಾದಿಯಲ್ಲಿ ಈ ಹಾವೊಂದು ಸಿಕ್ಕಿತು. ಅದರ ಮೈ ಮೇಲೆ ಬೊಟ್ಟುಗಳು ಎಷ್ಟು ಚೆನ್ನಾಗಿವೆ? ಅದು ತನ್ನ ಹಳೆಯ ತೊಗಲನ್ನು ಸರಿಸಿಕೊಂಡು ತಳತಳಿಸುವುದನ್ನು ಕಂಡು ನಾನು ಎತ್ತಿ ಕೈಗೆ ಸುತ್ತಿಕೊಂಡೆನು. ಜೇನೆ ಬಂದ ಆಡೊಂದು ಈ ಬಳ್ಳಿಯನ್ನು ತಿಂದು ತನ್ನ ಕುತ್ತವನ್ನು ನೀಗಿಕೊಂಡಿತು. ಈ ಬಳ್ಳಿಯನ್ನು ಕಿತ್ತಿಟ್ಟುಕೊಂಡು ಆಚೆಗಿರುವ ಹಳ್ಳಿಗೆ ಹೋದೆನು. ಅಲ್ಲಿ ಸಾವು ಇಂದೊ ನಾಳೆಯೊ ಎಂದುಕೊಂಡಿದ್ದ ಮುದುಕನೊಬ್ಬನಿಗೆ ಇದರ ರಸವನ್ನು ಹಿಂಡಿ ಕೊಟ್ಟೆನು. ಏನಾಶ್ಚರ್ಯ? ಗಳಿಗೆಯೊಳಗೆ ರೋಗವು ವಾಸಿಯಾಯಿತು!'—ಎಂದು ತನ್ನ ವೃತ್ತಾಂತ ವನ್ನು ಹೇಳಿದನು.

ಈ ಮಾತುಗಳನ್ನು ಕೇಳಿ ಅಶ್ವಪತಿಯು—'ಸರಿ, ವಿದ್ಯಾಧರಿಯು ಅವರವರಿಗೆ ತಕ್ಕಂತೆ ಬುದ್ಧಿಯನ್ನು ಕರುಣಿಸಿರುವಳು. ಈ ಬಾಲಕನ ವಿಷಯದಲ್ಲಿ ಮಾತ್ರ ಪಕ್ಷಪಾತ ಮಾಡಿದ್ದಾಳೆ. ಎಲ್ಲರಿಗೂ ಕೊಲ್ಲುವ ಶಕ್ತಿ ಕೊಟ್ಟರೆ ಈತನಿಗೆ ಉದ್ಧರಿಸುವ ಶಕ್ತಿ ಕೊಟ್ಟಿದ್ದಾಳೆ!'—ಎನ್ನುತ್ತ ಮೇಧಾವಿ ಯನ್ನು ಕೊಂಡಾಡಿದನು.

ಆ ಮೇಲೆ ಆ ಅರಸುಮಕ್ಕಳು ಕಟ್ಟಿಗೆ ತಂದು ಬೆಂಕಿ ಉರಿಸಿದರು. ಕೆಲವರು ಎರಳೆಗಳನ್ನು ಸುಲಿದು ಕೊಯ್ದು ಕಾಸಿದರು. ಆ ಮಾಂಸವು ಬೇಯುತಿದ್ದಾಗ ಎಲ್ಲರೂ ಹಿಮಜಲದಲ್ಲಿ ಮೈ ತೊಳೆದು ಕೊಂಡರು. ಅಷ್ಟರಲ್ಲಿ ಅನ್ನವು ಬೆಂದಿತು. ಎಲ್ಲರೂ ಕುಳಿತುಕೊಂಡು ಸಾಕಷ್ಟು ತಿಂದು, ತಿಳಿನೀರು ಕುಡಿದು, ತೊಗಲುಗಳನ್ನೂ ಎಲೆಗಳನ್ನೂ ಹಾಸಿ, ಒರಗಿಕೊಂಡು, ಸರದಿ ಪ್ರಕಾರ ವೀಣೆಯನ್ನು ಬಾರಿಸುತ್ತಾ ಹಾಡತೊಡಗಿದರು.

ಕೊಂಚ ಹೊತ್ತಿನ ಮೇಲೆ ಅಲ್ಲಿಂದೆದ್ದು, ಹುಲ್ಲಿಂದ ಹಸುರಾಗಿದ್ದೊಂದು ಕಡೆಗೆ ಹೋಗಿ, ಬಗೆಬಗೆಯ ಆಟಗಳನ್ನೂ ಅಭ್ಯಾಸಗಳನ್ನೂ ಮಾಡಿದರು. ಅವರ ಉಲ್ಲಾಸದ ನಗುವಿನಿಂದ ಗಿರಿಯೆಲ್ಲವೂ ಅದಿರಿ ಹೋಯಿತು. ಅಷ್ಟರಲ್ಲಿ ಅಶ್ವಪತಿಯು ವೀಣೆ ಬಾರಿಸಹತ್ತಿದನು. ಎಲ್ಲರೂ ನಾಟ್ಯಕ್ಕಾರಂಭಿಸಿದರು. ರಾತ್ರಿ ಬಹಳ ಹೊತ್ತಿನ ವರೆಗೂ ನಾಟ್ಯ ನಡೆಯಿತು. ಎಲ್ಲರೂ ದಣಿದ ಮೇಲೆ ಹೂಗಳ ಮೇಲೂ ಎಲೆಗಳ ಮೇಲೂ ಮಲಗಿ ನಿದ್ದೆ ಹೋದರು.

ರತ್ನಾಕರನ ಮಗನು ಕೂಡ ಅವರೊಂದಿಗೆ ಅರ್ತಿಯಿಂದ ನರ್ತಿಸಿ ನಿದ್ದೆ ಹೋದನು. ಅರುಣೋದಯಕ್ಕೆ ಸರಿಯಾಗಿ ಎಲ್ಲರೊಂದಿಗೆ ಎದ್ದು, ತಣ್ಣೀರಲ್ಲಿ ಮಿಂದು, ಅಶ್ವಪತಿಯ ಶಿಷ್ಯನಾದನು. ಅಂತಹ ಸಾಹಸಿಗಳ ಸಹವಾಸದ ಬಲದಿಂದ ಆತನಿಗೆ ತನ್ನ ಊರಿನದಾಗಲಿ ತಂದೆಯದಾಗಲಿ ನೆನಪಾಗಲೆ ಇಲ್ಲ. ದಿನ ಹೋಗುತ್ತ ಹೋಗುತ್ತ ಅಶ್ವಪತಿಯಿಂದ ಸಕಲ ಕಲೆಗಳನ್ನೂ ಕಲಿತುಕೊಂಡು, ಸಿಂಹದ ಮರಿಯಂತೆ ಕಾಣಿಸತೊಡಗಿದನು. ಅಶ್ವಪತಿಯು ಆತನನ್ನು ತನ್ನ ಬೆನ್ನ ಮೇಲೇರಿಸಿಕೊಂಡು, ಆಗಾಗ ಆತನಿಗೆ ಕುದುರೆಯೇರುವುದನ್ನು ಕೂಡ ಕಲಿಸಿಕೊಟ್ಟಿದ್ದನು. ಆದರೆ ನಾರು ಬೇರುಗಳ ಗುಣಗಳನ್ನು ಕಂಡುಕೊಂಡು ಕುತ್ತಗಳನ್ನು ನೀಗಿಸುವ ಶಕ್ತಿಯು ಆತನಲ್ಲಿ ವಿಶೇಷವಾಗಿತ್ತು. ಆದುದರಿಂದ ಅಶ್ವಪತಿಯು ಆತನನ್ನು ಅಮೃತಹಸ್ತನಾದ ಸುಧಾಕರನೆಂದು ಕರೆಯುತಿದ್ದನು.



# III

ಹತ್ತು ವರ್ಷಗಳು ದಾಟ ಹೋದವು. ಸುಧಾಕರನು ಈಗ ತರುಣ ನಾದನು. ಆತನ ಒಡನಾಡಿಗಳಲ್ಲಿ ಕೆಲವರು, ಗುರುಕುಲವಾಸವನ್ನು ಮುಗಿಸಿ, ಆಗಲೇ ತಂತಮ್ಮ ಊರುಗಳಿಗೆ ಹೊರಟು ಹೋಗಿದ್ದಾರೆ. ಮೇಧಾವಿಯ ಮುದ್ದುಗಳ ಮಹಿಮೆಯೂ, ವಜ್ರಾಂಗನ ಭುಜಬಲದ ಪ್ರಬಲತೆಯೂ, ಅಪರಾಜಿತನ ಅಪ್ಸರಾವಿವಾಹದ ಆಡಂಬರವೂ, ಜನ ಜಂಗುಳಿಯ ವಾಚಾಲತೆಯು ಹಾಸುಹೊಕ್ಕುಗಳಾಗಿದ್ದವು.

ಒಂದು ದಿನ ಸುಧಾಕರನು ಗುರುವಿನೊಂದಿಗೆ ಗಿರಿಶಿಖರದಲ್ಲಿ ನಿಂತಿ ದ್ದನು. ಒಂದು ಕಡೆ ಗಂಧರ್ವಗಿರಿಯೂ ಮತ್ತೊಂದು ಕಡೆ ದೇವಗಿರಿಯೂ ಇನ್ನೊಂದು ಕಡೆ ವಿಶಾಲವಾದ ಸಮುದ್ರವೂ ಕಾಣಿಸುತಿದ್ದುವು. ತೆಂಕಲು ನೋಡಿದಾಗ ಪೈರಿಂದ ಹಸುರಾದ ಹೊಲಗಳೂ, ಸೌಧಗಳಿಂದ ಶೋಭಿಸುತಿದ್ದ ನಗರಗಳೂ ಆತನ ದೃಷ್ಟಿಗೆ ಬಿದ್ದವು. ಈ ಸಂಪತ್ತನ್ನು ನಿಟ್ಟಿಸಿ ನಿಟ್ಟುಸಿರಿಟ್ಟು– 'ಗುರುವರ್ಯ! ಅಲ್ಲಿ ಕಾಣುವ ಇಳಾವರ್ತಕ್ಕೆ ನಾನು ಅಧಿಕಾರಿಯೆಂದು ನಮ್ಮ ಒಡನಾಡಿಗಳು ಹೇಳುತ್ತಾರೆ. ಆ ಮಾತು ದಿಟವಿರಬಹುದೆ?'— ಎಂದು ಕೇಳಿದನು.

**ಅಶ್ವಪತಿ**—'ದಿಟವಾಗಲಿ; ಸಟೆಯಾಗಲಿ! ಅದರಿಂದ ನಿನಗೇನು ಪ್ರಯೋಜನ?'

**ಸುಧಾ**— 'ದಿಟವಾಗಿದ್ದರೆ ಆ ರಾಜ್ಯವನ್ನು ವಶಪಡಿಸಿಕೊಂಡು ಇಟ್ಟು ಕೊಳ್ಳುವೆನಂತೆ!'

**ಅಶ್ವ**—'ಪ್ರಬಲನಾದ ಸೈಂಧವನು ಅದನ್ನು ವಶಪಡಿಸಿಕೊಂಡು ಬಹಳ ಕಾಲವಾಯಿತು. ಅಂತಹ ಸೈಂಧವನಿಗಿಂತಲೂ ನೀನೆ ಬಲಶಾಲಿಯೆಂದೆಣಿ ಸುವೆಯಾ?'

**ಸುಧಾ**—'ಹೇಗೆ ಹೇಳಲಿ? ಆದರೆ ನಮ್ಮ ನಮ್ಮ ಸತ್ವವನ್ನು ಒರೆಗಲ್ಲಿಗೆ ಹಾಕುವುದರಿಂದೇನು ದೋಷ?'

**ಅಶ್ವ**—'ಸುಧಾಕರಾ! ನೀನು ಇಳಾವರ್ತವನ್ನು ಆಳಬೇಕಾದರೆ ಎಷ್ಟೊ ಗಂಡಗಳಲ್ಲಿ ಪಾರಗಾಣ ಬೇಕಾಗಿದೆ. ಯಾರೂ ಕಂಡರಿಯದ ದೇಶ ಗಳಲ್ಲಿ ಬಗೆಬಗೆಯ ಸಂಕಟಗಳಿಗೀಡಾಗುವೆ!'

**ಸುಧಾ**—'ಯಾರೂ ಕಂಡರಿಯದುದನ್ನು ನಾನು ಕಾಣುವುದೆಂದರೆ ನನಗೆ ಸಂತೋಷದ ಸಂಗತಿಯೇ ಸರಿ!'

**ಅಶ್ವ**—'ಆಗಲಿ. ಗರಿ ಬಲಿಯುತ್ತಲೆ ಗೂಡನ್ನು ಬಿಡುವುದು ಸಹಜ! ಹಾಗಾದರೆ ನೀನು ಇಳಾವರ್ತಕ್ಕೆ ಹೋಗುವೆಯಾದರೆ ನನ್ನ ಎರಡೇ ಎರಡು ಮಾತುಗಳನ್ನು ಸಲಿಸು!'

**ಸುಧಾ**—'ಎರಡೇಕೆ? ಸಾವಿರ ಮಾತುಗಳಿದ್ದರೂ ಸಲಿಸಿಯೆ ಸಲಿಸುವೆನಂತೆ!'

**ಅಶ್ವ**—'ಸುಧಾಕರಾ! ಬಿರುನುಡಿಯನ್ನು ತೊರೆದು ಬಿಡು! ಆಡಿದಂತೆ ನಡೆಯುದಿರಬೇಡ! ಈ ಎರಡು ಮಾತುಗಳನ್ನು ಎಂದೂ ಮರೆಯಬೇಡ!'

ಅಶ್ವಪತಿಯು ಭೂತ ಭವಿಷ್ಯದ್ವಿಚಾರಗಳನ್ನು ಬಲ್ಲವನೆಂಬುದು ಸುಧಾಕರನಿಗೆ ತಿಳಿದಿತ್ತು. ಆದುದರಿಂದ ಈ ಎರಡು ನಿಯಮಗಳನ್ನು ಹೇಳುವುದಕ್ಕೆ ವಿಶೇಷ ಕಾರಣವಿರಬೇಕೆಂದು ತಿಳಿದುಕೊಂಡು ಮಾತು ಕೊಟ್ಟನು.

ಗುರುವನ್ನು ವಂದಿಸಿ, ಆಶೀರ್ವಾದ ಪಡೆದು, ಅಲ್ಲಿಂದಿಳಿದು ಧೀರನಂತೆ ಮುಂದಕ್ಕೆ ಹೋದನು. ಕಾಡು ಹೋಗಿ ನಾಡು ಬಂತು. ದೊಡ್ಡದೊಂದು ಹೊಳೆಯು ಅಡ್ಡವಾಯಿತು. ಬಿಸಿಲಿಗೆ ಹಿಮವು ಕರಗಿ ನದಿಯು ತುಂಬಿಕೊಂಡು ಹರಿಯುತಲಿತ್ತು. ಆ ನದಿಯ ದಡದಲ್ಲಿ ಒಬ್ಬಳು ಹಣ್ಣುಹಣ್ಣು ಮುದುಕಿಯು ಕುಳಿತಿದ್ದಳು. ಆಕೆಯು ಸುಧಾಕರನನ್ನು ಕಾಣುತ್ತಲೆ—'ಯಾರಯ್ಯಾ ಪುಣ್ಯಾತ್ಮ! ನನ್ನನ್ನೊಂದಿಷ್ಟು ಆಚೆಗೆ ದಾಟಿಸಲಾರೆಯಾ?'—ಎಂದಳು.

ಪ್ರವಾಹವು ಅಷ್ಟು ವೇಗವಾಗಿದ್ದರೂ, ತಳದ ಗುಂಡುಗಲ್ಲುಗಳು ಗರಗರನೆ ಉರುಳಿಕೊಂಡು ಹೋಗುತಿದ್ದರೂ, ತೀರದ ಬಂಡೆಗಳು ಅದಿರುತಿದ್ದರೂ ಧೀರನಾದ ಸುಧಾಕರನು ನದಿಯೊಳಗೆ ಇಳಿಯುವುದರಲ್ಲಿದ್ದನು. ಅವಸರದಿಂದ ಹೋಗುತಿದ್ದನಾದುದರಿಂದ ಮುದುಕಿಯ ಮಾತುಗಳನ್ನು ಲಕ್ಷ್ಯಿಸಲಿಲ್ಲ.

ಇದನ್ನು ತಿಳಿದು ಮುದುಕಿಯು ಪುನಃ ಕೂಗಿಕೊಂಡಳು.—'ಅಯ್ಯಾ ಮಹಾನುಭಾವ! ನಾನು ಮುದುಕಿ; ನಡೆಯಲಾರೆ. ದಯಮಾಡಿ ನನ್ನನ್ನು ದಾಟಿಸು. ತಾರಾದೇವಿಯು ಪ್ರೀತೆಯಾಗಲಿ!'

ಸುಧಾಕರನು ಆಕೆಯನ್ನು ತಿರಸ್ಕರಿಸುವುದರಲ್ಲಿದ್ದನು. ಆದರೆ ಗುರುವಿನ ಮಾತಿನ ನೆನಪಾದುದರಿಂದ—'ಅಮ್ಮಾ, ತಾರಾದೇವಿಯು ಪ್ರೀತೆಯಾಗಲಿ! ನಿನ್ನನ್ನು ಎತ್ತಿಕೊಂಡು ಹೋಗುತ್ತೇನೆ. ಆದರೆ ನಡುನೀರಿನಲ್ಲಿ ನಾವಿಬ್ಬರೂ ಬಳಿದುಕೊಂಡು ಹೋಗದಿದ್ದರೆ, ಆಚೆಯ ದಡದಲ್ಲಿಳಿಸುವೆನಂತೆ!'—ಎಂದು ಹೇಳಿದನು.

ಮುದುಕಿಯು ತಟ್ಟನೆ ಹಾರಿ ಸುಧಾಕರನ ಹೆಗಲಲ್ಲಿ ಕುಳಿತಳು. ಸುಧಾಕರನೂ ಆಕೆಯ ಚಟುವಟಿಕೆಗೂ ಭಾರಕ್ಕೂ ಅಚ್ಚರಿಗೊಂಡು ನೀರಿಗಿಳಿದನು. ಸೊಂಟದುದ್ದ ನೀರಾಯಿತು. ಗುಂಡುಗಲ್ಲುಗಳೆಡೆಯಲ್ಲಿ ಕಾಲು ಜಾರುತಿತ್ತು. ಕಲ್ಲುಗಳು ಕಾಲ ಮೇಲೆ ಉರುಳಿಕೊಂಡು ಬರುತಿದ್ದವು. ಬಲು ಕಷ್ಟದಿಂದಲೂ ಸಾಹಸದಿಂದಲೂ ಸಾಗುತಲಿದ್ದನು.

ಅಷ್ಟರಲ್ಲಿ ಮುದುಕಿಯು—'ಮೂರ್ಖಾ! ನನ್ನ ಸೀರೆ ತೊಯಿದು ಹೋಯಿತು. ನನ್ನಂತಹ ದುರ್ಬಲೆಯಾದ ಮುದುಕಿಯೊಂದಿಗೆ ನಿನ್ನ ವಿನೋದವೆ?'—ಎಂದು ಜರೆದಳು.

ಈ ಮಾತುಗಳನ್ನು ಕೇಳಿ ಸುಧಾಕರನಿಗೆ ಆಕೆಯನ್ನು ಅಲ್ಲಿಯೆ ಹೊತ್ತು ಹಾಕಬೇಕೆಂಬ ಮನಸ್ಸಾಯಿತು. ಆದರೆ ಗುರ್ವಾಜ್ಞೆಯನ್ನು ಸ್ಮರಿಸಿಕೊಂಡು, ಕೋಪವನ್ನು ನುಂಗಿಕೊಂಡು—'ತಾಯಿ! ಸಮಾಧಾನ ತಂದುಕೊ. ಕಾಲು ಜಾರಿದರೆ ಆನೆಯಾದರೂ ಬೀಳದಿರದು!'—ಎಂದನು.

ಕೊನೆಗೆ ಹೇಗಾದರೂ ಮಾಡಿ ಆಕೆಯನ್ನು ಸುರಕ್ಷಿತೆಯಾಗಿ ದಡದಲ್ಲಿಳಿಸಿದನು. ತಾನು ತೀರ ಬಳಲಿ ಹೋಗಿದ್ದುದರಿಂದ ಹುಲ್ಲ ಮೇಲೆ ಉಬ್ಬಸ ಬಿಡುತ್ತ ಬಿದ್ದುಕೊಂಡನು. ದಣುವಾರಿದ ಮೇಲೆ ಹಾದಿ ಹಿಡಿಯಲು ಎದ್ದನು. ತಾನಿಷ್ಟು ಪ್ರಯಾಸ ಪಟ್ಟಿದ್ದರೂ ಆ ಮುದುಕಿಯು ಒಂದೇ ಒಂದು ಸವಿನುಡಿ ಕೂಡ ಹೇಳಲಿಲ್ಲವೆಂದು ಆತನ ಮನಸ್ಸಿಗೆ ಹೊಳೆದು, ಆಕೆಯ ಕಡೆಗೆ ಕಣ್ಣನ್ನು ಹೊರಳಿಸಿದನು.

ಆಗಲೇನು ನೋಡುವುದು? ಮುದುಕಿಯು ಬಲು ಚೆಲುವೆಯಾದ ದೇವಕನ್ನಿಕೆಯಾಗಿ ನಿಂತಿದ್ದಳು! ಉಡುವೇನು? ಒಡವೆಗಳೇನು? ಎಲ್ಲವೂ ತಳತಳಿಸುತಿದ್ದವು! ಕರುಣಾರ್ದ್ರ ದೃಷ್ಟಿಯಿಂದ ಸುಧಾಕರನನ್ನು ನೋಡುತಿದ್ದಳು. ಸುಧಾಕರನು ಆಕೆಯ ಕಾಲ ಮೇಲೆ ಕವಿದನು.

ಆ ದೇವಿಯು—'ಸುಧಾಕರ! ಅಂಜಬೇಡ, ನನ್ನನ್ನು ದೇವರಾಣಿಯಾದ ತಾರಾದೇವಿಯೆಂದು ತಿಳಿ! ಕೃತಿಗೆ ತಕ್ಕಂತೆ ಫಲವು ದೊರಕುವುದು. ಸಂಕಟವೊದಗಿದಾಗ ನನ್ನನ್ನು ಸ್ಮರಿಸು!'—ಎಂದು ಅಭಯವಿತ್ತಳು.

ಸುಧಾಕರನು ಮೊಗವೆತ್ತಿ ನೋಡಿದಾಗ ದೇವಿಯೂ ಇಲ್ಲ, ಯಾರೂ ಇಲ್ಲ! ಬಿಳುಪಾದ ಮುಗಿಲೊಂದು ಅಂತರಿಕ್ಷದಲ್ಲಿ ತೇಲಿಕೊಂಡು ಹೋಗುತಲಿತ್ತು. ಅಶ್ವಪತಿಯು ಇಂತಹ ಅವಸರವನ್ನು ಕಂಡುಕೊಂಡೆ ತನ್ನಿಂದ ಮಾತು ತೆಗೆದುಕೊಂಡನೆಂದು ಸುಧಾಕರನಿಗೆ ಈಗ ತಿಳಿಯಿತು. ಆ ಪರಮ ಗುರುವಿಗೆ ಮನದಲ್ಲಿಯೆ ಮಣಿದು ವಂದಿಸಿ ಮುಂದಕ್ಕೆ ಸಾಗಿದನು.

ಇಳಾವರ್ತದ ನಾಗರಿಕರು ಈತನ ತೇಜೋಮೂರ್ತಿಯನ್ನು ಕಂಡು, ಮೆಲ್ಲಮೆಲ್ಲಗೆ ಏನೋ ಆಡಿಕೊಳ್ಳುತಿದ್ದರು. ಕೊನೆಗೊಬ್ಬ ವೃದ್ಧನು ಈತನ ಬಳಿಗೆ ಬಂದು—'ಮಹಾಶಯ! ಯಾವನು ನೀನು? ಎಲ್ಲಿಂದ ಬಂದೆ? ಇಲ್ಲೇನು ಕಾರ್ಯವಿದೆ ನಿನಗೆ?'—ಎಂದು ಕೇಳಿದನು.

ಸುಧಾಕರನು—'ಅಯ್ಯಾ, ನನ್ನ ಹೆಸರು ಸುಧಾಕರ. ಗಂಧರ್ವಗಿರಿಯಿಂದ ಬಂದಿದ್ದೇನೆ. ನಿಮ್ಮ ದೊರೆಯಾದ ಸೈಂಧವನಲ್ಲಿ ನನಗೆ ಕೆಲಸವಿದೆ. ಅರಮನೆಯೆಲ್ಲಿದೆ? ತೋರಿಕೊಡಿರಿ!'—ಎಂದನು.

ಆ ವೃದ್ಧನು ಬೆರಗಾಗಿ—'ಹಾಗಾದರೆ, ನಿನಗೆ ಆ ವಟವಾಣಿಯ ವಿಚಾರ ತಿಳಿಯದೆಂದು ಕಾಣುತ್ತಿದೆ! ತಿಳಿದಿದ್ದರೆ ಒಂದು ಕಾಲಿಗೆ ಮಾತ್ರ ಆವುಗೆ ಹಾಕಿಕೊಂಡು, ಉಲ್ಲಾಸದಿಂದ ಬರುತಿರಲಿಲ್ಲ!'—ಎಂದನು.

ಸುಧಾಕರನು—'ಅದೊಂದೂ ನನಗೆ ತಿಳಿಯದು. ನದಿಯೊಳಗೆ ಒಂದು ಆವುಗೆಯು ಜಾರಿಕೊಂಡಿತು!'—ಎಂದನು.

ಆಗಲಾ ನಾಗರಿಕರು ಒಬ್ಬನ ಮೊಗವನ್ನೊಬ್ಬನು ನೋಡುತ್ತ—'ಅಯ್ಯಾ! ಇಲ್ಲಿ ಕೇಳು. ಏಕಪಾದುಕೆಯುವನಿಂದ ಸೈಂಧವನಿಗೆ ಸೋಲು ಬರುವುದೆಂದು ವಾಣೀವಿಲಾಸದ ವಟವು ನುಡಿದಿರುವುದು. ಆದುದರಿಂದ ಭೀಕರನೂ ಕುತಂತ್ರಿಯೂ ಆಗಿರುವ ಸೈಂಧವನಿಗೆ ಇದಿರು ನಿಲ್ಲುವ ಪ್ರಸಂಗ ಬಂದೀತು! ಜೋಕೆ!'—ಎಂದು ಎಚ್ಚರಿಸಿದರು.

ಸುಧಾಕರನು ನಗುತ್ತ—'ಚೆನ್ನಾಗಿದೆ! ಇದೊಂದು ಶುಭಸೂಚನೆಯೇ ಸರಿ! ನಾನು ಬಂದುದು ಕೂಡ ಅದಕ್ಕಾಗಿಯೆ!'—ಎಂದು ಹೇಳಿ

ಮುನ್ನಡೆದನು. ಅರಮನೆಯ ಬಾಗಿಲಿಗೆ ಹೋಗಿ, ದೊರೆಯ ಹೆಸರೆತ್ತಿ—'ಸೈಂಧವಾ! ಹೊರಕ್ಕೆ ಬಾ! ರಾಜ್ಯಬೇಕಾಗಿದ್ದರೆ ನನ್ನೊಂದಿಗೆ ಕಾದು!'—ಎಂದು ಆರ್ಭಟಿಸಿದನು.

ಸೈಂಧವನು ದಿಗಿಲುಗೊಂಡು ಹೊರಗೆ ಬಂದು—'ಯಾರಯ್ಯಾ ನೀನು? ಇಷ್ಟು ಹಮ್ಮಿನವನು?'—ಎಂದನು.

ಸುಧಾ—'ನಾನೇ? ನಾನು ರತ್ನಾಕರನ ಮಗನು! ಸುಧಾಕರನು! ಈ ರಾಜ್ಯಕ್ಕಧಿಕಾರಿ!'—ಎಂದನು.

ಸೈಂಧವನು ಕೈಗಳನ್ನು ಮೇಲಕ್ಕೆತ್ತಿ ಅಳುವಂತೆ ನಟಿಸುತ್ತ—'ಆಹಾ! ದೇವತೆಗಳು ಇಂದು ನನ್ನ ಮೇಲೆ ಕಣ್ಣು ತೆರೆದರು! ಈ ಬಾಲಕನನ್ನು ಕರೆತಂದು ನನ್ನ ಚಿಂತೆಯು ಹಿಂಗುವಂತೆ ಮಾಡಿದರು! ವತ್ಸಾ! ಬಾ, ಒಳಕ್ಕೆ ಬಾ! ನನ್ನ ಉತ್ತರಾಧಿಕಾರಿ ಯಾರೆಂದು ಹಂಬಲಿಸುತ್ತಿದ್ದೆನು. ನನಗಿರುವುದು ಮೂವರು ಕುವರಿಯರು ಮಾತ್ರ. ಗಂಡುಸಂತತಿ ಇಲ್ಲ. ಈಗ ನೀನು ನಮ್ಮ ಅಣ್ಣನ ಮಗನಾಗಿದ್ದರೂ ನನಗೂ ಮಗನಾದೆ. ನನ್ನ ಕುವರಿಯರಲ್ಲೊಬ್ಬಳನ್ನು ಮದುವೆನಿಂತು ಈ ರಾಜ್ಯವನ್ನಾಳುವೆಯಂತೆ! ರಾಜ್ಯವೇನೊ ಅವದಶೆಯದು; ಆಳುವವನು ಅಸುಖಿಯಾಗುವನು! ಹೇಗೂ ಇರಲಿ. ಈಗ ಒಳಕ್ಕೆ ನಡೆ'—ಎಂದು ಹೇಳಿ ಸುಧಾಕರನನ್ನು ಕೈಹಿಡಿದು ಕರೆದುಕೊಂಡು ಹೋದನು. ರುಚಿರುಚಿಯಾದ ಪಕ್ವಾನ್ನಗಳನ್ನು ಉಣಬಡಿಸಿದನು. ಉಂಡು ತಿಂದು ತೇಗಿದ ಮೇಲೆ ಸುಧಾಕರನ ಸಿಟ್ಟು ಶಾಂತವಾಯಿತು. ಆ ರಾಜನ ಕುವರಿಯರ ಚೆಲುವನ್ನು ಕಂಡು, ಅವರಲ್ಲೊಬ್ಬಳನ್ನು ಮದುವೆಯಾದರೂ ಆಗಬಹುದೆಂದೆಣಿಸಿದನು.

ಊಟ ಉಪಚಾರಗಳೆಲ್ಲವೂ ಮುಗಿದ ಮೇಲೆ ಸುಧಾಕರನು ರಾಜನೊಡನೆ—'ಈ ರಾಜ್ಯಕ್ಕೇನು ಅವದಶೆ? ಆಳುವನಿಗೇಕೆ ಅಸುಖ?'—ಎಂದು ಪ್ರಶ್ನೆ ಹಾಕಿದನು.

ಸೈಂಧವನು ನಿಟ್ಟುಸಿರಿಟ್ಟು—'ಏಳು ವರುಷವಾಯಿತು; ಒಂದು ರಾತ್ರಿಯೂ ನನಗೆ ನಿದ್ದೆ ಹತ್ತದು! ಆ ಹೊಂದೊವಲನ್ನು ತರುವ ತನಕ ಯಾವನು ರಾಜನಾದರೂ ಈ ಆವಸ್ಥೆಯು ತಪ್ಪದು'—ಎಂದು ಹೇಳಿ ಜೀಮೂತನ ಕಥೆಯನ್ನು ವಿಸ್ತರಿಸಿದನು. ಅದರೊಂದಿಗೆ ತನಗೆ ಜೀಮೂತನು ಕಾಣಿಸಿಕೊಂಡು,

ತನ್ನನ್ನು ರಾತ್ರಿಂದಿವವೂ ಕಾಡುತ್ತಿರುವನೆಂದು ಸುಳ್ಳು ಕೂಡ ಹೇಳಿದನು! ಮೊದಲೆ ಕಲಿಸಿಕೊಟ್ಟಿದ್ದಂತೆ ಆ ರಾಜಕುಮಾರಿಯರು ಸಹ ಇದೇ ಕತೆಯನ್ನು ಹೇಳಿ ಮಮ್ಮಲ ಮರುಗಿದರು.

ಸುಧಾಕರನು ಹೊಂದೋವಲಿನ ಸಂಗತಿಯನ್ನು ಹಿಂದೆ ಹಲವು ವೇಳೆ ಕೇಳಿದ್ದನು. ಅದನ್ನು ತರುವುದೆಂದರೆ ಕೇವಲ ಅಸಾಧ್ಯವೆಂದು ತಿಳಿದು, ಅದರ ಹಂಬಲನ್ನೆ ತೊರೆದಿದ್ದನು. ಈಗ ಇವರ ಮಾತುಗಳನ್ನು ಕೇಳಿ ಚಿಂತಾಪರನಾದನು. ಸೈಂಧವನು ಇದನ್ನು ಕಂಡು ಬೇರೆ ಮಾತೆತ್ತಿದನು. ರಾಜ್ಯ ನಡೆಯಿಸುವ ವಿಧಾನದಲ್ಲಿ ಹಲವು ಸಲಹೆಗಳನ್ನು ಕೇಳಿಕೊಂಡನು. ಬಲು ಹೊತ್ತು ಮಾತನಾಡಿದರು. ಸುಧಾಕರನಿಗೆ ಸೈಂಧವನ ಸರಳತೆಯನ್ನು ಕಂಡು, ಆತನ ವಿಷಯವಾಗಿ ಸದ್ಭಾವವು ಉತ್ಪನ್ನವಾಯಿತು. ಆದುದರಿಂದ ಆತನು—'ರಾಜನೆ! ನೀನು ಮಹಾಕ್ರೂರನೆಂದು ಜನರು ಆಡಿಕೊಳ್ಳುವರು. ಆದರೆ ನನಗೆ ಹಾಗೇನೂ ಕಾಣಿಸುವುದಿಲ್ಲ. ಇಂತಹ ಸದ್ಗುಣಿಯಾದ ನೀನು ನಮ್ಮ ತಂದೆಯನ್ನೇಕೆ ಹೊಡೆದೋಡಿಸಿದೆ?'—ಎಂದು ಕೇಳಿದನು.

ಆಗಲಾ ಕಪಟಿಯು—'ಜನರ ಮಾತು ತೀರ ಸುಳ್ಳು! ನಿಮ್ಮ ತಂದೆಯು ಮುದುಕನಾದುದರಿಂದ ರಾಜ್ಯವಾಳಲಾರದೆ, ತನಗೆ ತಾನಾಗಿಯೆ ಒಪ್ಪಿಸಿದನಲ್ಲದೆ, ನಾನು ಬೇರೆ ಬಲಾತ್ಕಾರದಿಂದ ಸುಲಿದುಕೊಂಡುದಲ್ಲ. ಬೇಕಾದರೆ ನಾಳೆ ಆತನನ್ನೆ ಕಂಡು ಕೇಳುವೆಯಂತೆ. ಎಲ್ಲವೂ ತಿಳಿದುಬರುವುದು'—ಎಂದು ತನ್ನ ಕ್ರೌರ್ಯವನ್ನು ಮರೆಮಾಡಿದನು.

ಮರುದಿನ ತಂದೆಯನ್ನು ಕಾಣುವೆನೆಂಬ ಉತ್ಸಾಹದಿಂದ ಸುಧಾಕರನಿಗೆ ಸೈಂಧವನ ವಂಚನೆಯು ತಿಳಿಯಲಿಲ್ಲ. ಈ ಸಂಧಿಯನ್ನು ಕಂಡುಕೊಂಡು ಸೈಂಧವನು ಮಾತು ಮುಂದುವರಿಸಿದನು—'ಸುಧಾಕರಾ! ನಿನ್ನ ಹರೆಯ ಕಿರಿದಾದರೂ ಅರಿವು ಹಿರಿದು! ನೋಡು, ನನಗೊಬ್ಬ ವೈರಿಯಿರುವನು. ಆತನನ್ನು ಕಂಡರೆ ಬಲು ಭೀತಿ. ನಾನೇನೊ ಆತನಿಗಿಂತ ಬಲಶಾಲಿ ಎಂಬುದು ನಿಜ. ಆದರೆ ಆತನನ್ನು ನಮ್ಮಲ್ಲಿ ಇರಗೊಡಿಸಿದರೆ ಪರಿಣಾಮವು ಹಿತಕರವಾಗದೆಂಬುದು ಖಂಡಿತ. ಇಂತಹ ಶತ್ರುವನ್ನು ಹೇಗೆ ನಿವಾರಣ ಮಾಡಲಿ? ನೀನೇನು ಹೇಳುವೆ?'—ಎಂದನು.

ಸುಧಾಕರನು ಕೊಂಚ ಯೋಚಿಸಿ—'ಏಕೆ? ನಾನಾದರೊ ಆ ಹೊಂ

ದೊವಲನ್ನು ತರುವಂತೆ ಅವನಿಗೆ ಹೇಳುತಿದ್ದೆ. ಒಂದು ಸಲ ಹೊರಟನೆಂದರೆ ಮತ್ತೆ ತಿರುಗಿ ಬರುವ ಸಂಭವವಿಲ್ಲ!'—ಎಂದು ನುಡಿದನು.

ಸೈಂಧವನ ಕಣ್ಣುಗಳಿಂದ ಸಂತೋಷವು ನೂಸುತಲಿತ್ತು. ಸುಧಾಕರನಿಗೆ ಇದರ ಗೂಢವು ತಟ್ಟನೆ ಹೊಳೆಯಿತು. ತಾನು ಬಲಿಗೆ ಬಿದ್ದೆನೆಂದು ಗ್ರಹಿಸಿದನು. ಸೈಂಧವನು ಶಾಂತವಾಗಿ—'ನಿಜ ನಿಜ! ಆತನನ್ನು ಅದೇ ಕೆಲಸಕ್ಕೆ ನೇಮಿಸುವೆವಂತೆ'—ಎಂದು ಹೇಳಿದನು.

ಸುಧಾಕರನು ತಟ್ಟನೆ ಎದ್ದುನಿಂತು—'ಏನು? ಏಕ ಪಾದುಕೆಯವನೆಂದು ನನ್ನ ವಿಚಾರವಾಗಿಯೆ ಈ ಯುಕ್ತಿಯನ್ನು ಹವಣಿಸಿರುವೆಯು?'—ಎಂದು ಗರ್ಜಿಸಿದನು.

ಸೈಂಧವನು ರೇಗಿಕೊಳ್ಳದೆ—'ಏತಕ್ಕಾಗಿ ಪೂರ್ವಾಪರವಿಚಾರ ಮಾಡದೆ ಮಾತನಾಡುತ್ತಿ? ನೀನೆಯಲ್ಲವೆ ಈ ಯುಕ್ತಿಯನ್ನು ಕಲಿಸಿಕೊಟ್ಟವನು? ಮತ್ತೇಕೆ ನನ್ನ ಮೇಲೆ ರೇಗಿ ಬೀಳುವೆ? ಅಂತಹ ಶತ್ರುವನ್ನು ಹಾಲೆರೆದು ಸಲಹಬೇಕೆಂದು ಹೇಳಿದ್ದರೆ ಹಾಗೆಯೆ ಮಾಡುತಿದ್ದೆನು. ಮನೆಯಳಿಯನಾಗಿನೆಂದು ಹೇಳಿದ್ದರೆ ಅದಕ್ಕೂ ನನ್ನ ಆಕ್ಷೇಪಣೆ ಇರುತ್ತಿರಲಿಲ್ಲ. ಈ ವಿಷಯದಲ್ಲಿ ಮಾತ್ರ ನಾನೇಕೆ ಅಡ್ಡಿ ಮಾಡಬೇಕು? ಅಂತಹ ವ್ಯಕ್ತಿಯು ನಶ್ವರವಾದ ಕೀರ್ತಿಯನ್ನು ಸಂಪಾದಿಸಲಿ! ನಾನೇನೂ ನಿನಗೆ ಕೇಡು ಬಗೆದಿಲ್ಲ. ಆದರೆ ನೀನು ವೀರನೆಂಬುದೂ, ಆಡಿದುದನ್ನು ಮಾಡಿ ತೀರಿಸುವನೆಂಬುದೂ, ಕೀರ್ತಿಕಾಮನೆಂಬುದೂ ನನಗೆ ತಿಳಿಯದ ಸಂಗತಿಯಲ್ಲ!'—ಎಂದು ಹೇಳಿದನು.

ಸುಧಾಕರನಿಗೆ ಅಶ್ವಪತಿಯು ಎರಡನೆಯ ಮಾತು ಜ್ಞಾಪಕವಾಯಿತು. —'ಆಡಿದಂತೆ ನಡೆಯದಿರಬೇಡ!'—ಹೊಂದೊವಲನ್ನು ತರುವ ಯೋಗವು ತನಗಿರುವುದರಿಂದಲೆ ಅಶ್ವಪತಿಯು ಹೀಗೆ ಹೇಳಿರಬೇಕೆಂದೆಣಿಸಿ—'ಆಗಲಿ. ಸೈಂಧವರಾಜಾ! ನಿನ್ನ ಕಪಟಕ್ಕೆ ನಾನು ಸಿಲುಕಿಕೊಂಡೆನು. ನನಗೆ ಕೀರ್ತಿ ಬೇಕು! ಮಾತು ತಪ್ಪುವನಲ್ಲ! ಹೊಂದೊವಲನ್ನು ತಂದೇ ತರುವೆನು! ಆದರೆ ನೀನು ಕೂಡ ಒಂದು ಮಾತು ಕೊಡಬೇಕು. ನಾನು ಬರುವಲ್ಲಿವರೆಗೆ ನಮ್ಮ ತಂದೆಯನ್ನು ಮಮತೆಯಿಂದ ಸಲಹಬೇಕು. ಹೊಂದೊವಲನ್ನು ತಂದ ದಿನವೆ ರಾಜ್ಯವನ್ನು ನನಗೆ ಬಿಟ್ಟು ಕೊಡಬೇಕು! ಏನು? ಹೇಳು?'—ಎಂದು ಕೇಳಿದನು.

ಸುಧಾಕರನ ಧೀರತ್ವಕ್ಕೆ ಮೆಚ್ಚಿ ಸೈಂಧವನು—'ಆಗಲಿ; ಹಾಗೆಯೆ ಮಾಡುವೆನಂತೆ, ಹೊಂದೊವಲನ್ನು ತರುವವನಿಗೆ ರಾಜ್ಯವನ್ನು ಕೊಡುವುದ ರಿಂದ ಅವಮಾನವೇನೂ ತಟ್ಟದು!'—ಎಂದು ನುಡಿದನು.

ಇಷ್ಟೆಲ್ಲ ಮಾತುಕತೆಗಳಾದ ಮೇಲೆ ಇಬ್ಬರೂ ಮಲಗಿದರು. ಸೈಂಧ ವನು ಗೊರಿಕೆ ಹಾಕಹತ್ತಿದನು. ಸುಧಾಕರನಿಗೆ ಮಾತ್ರ ನಿದ್ದೆ ಹತ್ತಲೊ ಲ್ಲದು. ಹಾಸುಗೆಯಲ್ಲಿ ಅತ್ತಿತ್ತ ಹೊರಳಾಡಿ ಹಲವು ಬಗೆಯ ಹಾದಿಗಳನ್ನು ಯೋಚಿಸಿದನು. ಯಾವುದೂ ಸರಿ ಬೀಳಲಿಲ್ಲ. ಜೀಮೂತನು ತನ್ನನ್ನು ಕರೆ ಯುವಂತೆ ದನಿ ಕೂಡ ಕೇಳಿಸಿದಂತಾಯಿತು. ಕೊನೆಗೆ ತಾರಾದೇವಿಯ ಮಾತಿನ ತತ್ವವನ್ನು ನಿರ್ಧರಿಸಬೇಕೆಂದು ಗೊತ್ತುಮಾಡಿಕೊಂಡನು.

ಬೆಳಗಾಗುತ್ತಲೆ ತಾರಾದೇವಿಗೊಂದು ಬಲಿಯನ್ನರ್ಪಿಸಿ, ಅನನ್ಯಮನಸ್ಕ ನಾಗಿ ನಿಂತುಕೊಂಡನು. ಅಷ್ಟರಲ್ಲಿ ತಾರಾದೇವಿಯು ಆತನಿಗೊಂದು ಯೋ ಚನೆಯನ್ನು ಹುಟ್ಟಿಸಿದಳು. ನೆಟ್ಟನೆ ಸೈಂಧವನ ಬಳಿಗೆ ಹೋಗಿ—'ಹೊಂ ದೊವಲನ್ನು ನಾನು ತರಬೇಕೆಂದಿದ್ದರೆ ನನಗೆ ಕೊಂಚ ಸಹಾಯ ಬೇಕಾಗಿದೆ. ಈ ಕ್ಷಣವೆ ಇಬ್ಬರು ರಾಜದೂತರನ್ನು ಕಳುಹಿಕೊಡು. ಎಲ್ಲೆಲ್ಲಿಯೂ ಹೋಗಿ, ಅಶ್ವಪತಿಯ ಶಿಷ್ಯರಾದ ಯವನ ವೀರರಲ್ಲಿ ಈ ವಾರ್ತೆಯನ್ನು ಹಬ್ಬಿಸಲಿ, ಬರುವವರು ಬಂದರೆ ಹಡಗು ಕಟ್ಟಿಕೊಂಡು ಹೊರಡಲು ಅನುವಾಗುವುದು,' ಎಂದು ಹೇಳಿದನು.

ಸೈಂಧವನು ಅದಕ್ಕೊಪ್ಪಿಕೊಂಡು ದೂತರನ್ನು ಕಳುಹಿದನು.—'ವೀರ ರೆಲ್ಲರೂ ಇವನೊಂದಿಗೆ ಹೋದರೆಂದರೆ ಮತ್ತೆ ನನಗೆ ಕಾಟ ತೀರಿದಂತಾಗು ವುದು! ಆ ಕಂಟಕಿಗಳು ಕೂಡ ಇವನೊಡನೆ ಮಡಿಯಲಿ!'—ಎಂದು ಹಿಗ್ಗಿ ಕೊಂಡನು.



# IV

ಇತ್ತ ರಾಜದೂತರು ದೇಶದೇಶಗಳಲ್ಲಿ—'ಯೊಂದೊವಲ ಹಂಬಲನ್ನು ಬಯಸುವವರು ಬರಲಿ!'—ಎಂದು ಸಾರುತ್ತ ಹೋದರು. ತಾರಾದೇವಿಯ ಅನುಗ್ರಹದಿಂದ ಹಲವರು ವೀರರ ಹೃದಯದಲ್ಲಿ ಉಲ್ಲಾಸವು ಅಂಕುರಿಸಿತು. ಒಬ್ಬೊಬ್ಬರಾಗಿಯೆ ಇಳಾವರ್ತಕ್ಕೆ ಬರತೊಡಗಿದರು.

ಮೊತ್ತ ಮೊದಲು ವಜ್ರಾಂಗನು ಬಂದನು. ಜತೆಯಲ್ಲಿ ಶಿಷ್ಯ ಪರಿವಾಹಕನು ಬಿಲ್ಲುಬಾಣಗಳನ್ನು ಹೊತ್ತುಕೊಂಡು ಬಂದಿದ್ದನು. ಆ ಮೇಲೆ ಹಡಗು ನಡೆಸುವುದರಲ್ಲಿ ಚತುರನಾದ ಕರ್ಣದತ್ತನ ಬರವಾಯಿತು. ಅವನ ಹಿಂದೆ ಸುಂದರಾಕೃತಿಯ ಸುಂದರಸೇನನು ಬಂದನು. ಅಷ್ಟರಲ್ಲಿ ತೀವ್ರಗಮನ ವೇಗಚಾಲಕರೆಂಬ ಹಂಸ ಪುತ್ರರು ಬಂದರು. ಚಂಡಸೇನನೂ ಬಂದನು. ಈತನಷ್ಟು ಬಲಶಾಲಿ ಯಾವನೂ ಇಲ್ಲವಂತೆ! ಒಂದು ಸಲ ಗಂಧರ್ವರು ಈತನನ್ನು ಕೊಲ್ಲಬೇಕೆಂದು ತುಂಬ ಪ್ರಯತ್ನ ಪಟ್ಟರು. ಮರಗಳನ್ನೆ ಈತನ ಮೇಲೆ ಒಟ್ಟಿದರು. ಆದರೂ ಈತನ ಕೂದಲು ಕೂಡ ಕೊಂಕಲಿಲ್ಲ! ಒಂದೆಡೆ ಮಾರುತಿ ಅತಿವೇಲರೆಂಬ ವಾಯು ಪುತ್ರರು ಬಂದರು. ಮತ್ತೊಂದೆಡೆ ಜಲದೇವಿಯಾದ ಸಾಗರಿಕೆಯ ಪತಿ ಅಪರಾಜಿತನು ನಡೆತಂದನು. ಮೃಗ ಭಾಷಾ ವಿಶಾರದನಾದ ವಾಗೀಶ, ಮುಂದಿನದನ್ನು ಇಂದೇ ಹೇಳ ಬಲ್ಲ ಕಾಲನೇಮಿ, ಗ್ರಹನಕ್ಷತ್ರಗಳ ತತ್ವಗಳನ್ನು ತಿಳಿದಿದ್ದ ಗ್ರಹಮಿತ್ರ, ಶಿಲ್ಪಕುಶಲನಾದ ತಾರಕ—ಇನ್ನೂ ಹಲವರು ಹೆಸರುಗೊಂಡ ವೀರರು ಬಂದು ನೆರೆದರು. ಹೊನ್ನು ಕೆತ್ತಿದ ಹಿತ್ತಾಳಿಯ ಶಿರಸ್ತ್ರಾಣ! ತುದಿಯಲ್ಲಿ ಕುದುರೆಗೂದಲಿನ ಚುಂಚು! ಉಕ್ಕಿನ ಕವಚ; ಮೇಲ್ಗಡೆ ತೆಳ್ಳನಾದ ನೂಲಿನ ಅಂಗಿ! ಮೊಣಕಾಲುಗಳಿಗೆ ಬೆಳ್ಳನಾದ ತವರದ ರಕ್ಷೆ! ಹೆಗಲಲ್ಲಿ ಒರಟಾದ ತೊಗಲಿನ ಬಲವಾದ ಗುರಾಣಿ! ಬೆಳ್ಳಿಯ ಒರೆಯೊಳಗೆ ಕಂಚಿನ ಹದವಾದ ಕತ್ತಿ! ಬಲಗೈಯಲ್ಲಿ ಬಿರುಸಾದ ಮರದ ಒಂದು ಜತೆ ಕುಂತಗಳು! ಈ ರೀತಿ ಅಲಂಕೃತರಾದ ವೀರರ ತಂಡವನ್ನು ಕಂಡು ಯಾರು ತಾನೆ ಆನಂದ ಪಡದೆ ಇರುವರು? ಇಳಾವರ್ತದ ನಾಗರಿಕರು ಈ ವೀರಮೂರ್ತಿಗಳನ್ನು ಕಂಡು ಕಂಡು ದಣಿಯರು!—'ಇಂತಹ ನೋಟವು.ಕೇವಲ ಅಪೂರ್ವ'—ಎಂದು ಕೊಂಡಾಡಿ

ದರು. ಹೆಂಗುಸರು ಮಾತ್ರ—'ಅಯ್ಯೊ! ಅಳಿವಿಗೆ ಇಳಿಯುವರಷ್ಟೆ!'— ಎಂದು ಮರುಗುತ್ತಲಿದ್ದರು.

ಮರುದಿನ ವೀರರು ಹತ್ತಿರದ ಬೆಟ್ಟಗಳಿಗೆ ಹೋಗಿ, ತಕ್ಕ ಮರಗಳನ್ನು ಕಡಿದು, ತಾರಕನ ಸೂಚನೆಯಂತೆ ನಾವೆಯನ್ನು ನಿರ್ಮಿಸುವ ಕೆಲಸಕ್ಕೆ ಕೈ ಹಾಕಿದರು. ಉದ್ದವಾದ ನಾವೆಯನ್ನು ಕಟ್ಟಿದರು. ಅದರಲ್ಲಿ ಐವತ್ತು ಅರಿತ್ರಗಳಿಗೆ ಎಡೆ ಮಾಡಿದರು. ಕರಿಬಣ್ಣವನ್ನು ಬಳಿದರು. ಮುಂಭಾಗ ದಲ್ಲಿ ಮಾತ್ರ ಕೆಂಬಣ್ಣ. ತಾರಕನಿಂದ ನಿರ್ಮಿತವಾದುದರಿಂದ ತಾರಿಣೀ ಎಂದು ಹೆಸರಿಟ್ಟರು. ಈ ನಾವೆಯನ್ನು ಕಟ್ಟಲು ಹಲವು ದಿನ ಹಿಡಿಯಿತು.

ಸುಧಾಕರನು ಮಾತ್ರ ನಾವೆ ಕಟ್ಟಲು ಬರಲಿಲ್ಲ. ಅತನು ಬಡಗು ನಾಡಿಗೆ ಹೋಗಿದ್ದನು. ಅಲ್ಲಿ ತನ್ನ ಗುರುಬಂಧುವಾದ ಗೀತಾಧರನು ಬರ್ಬರರ ನಾಡಿನಲ್ಲಿ ವಾಸವಾಗಿದ್ದುದು ಅತನಿಗೆ ತಿಳಿದಿತ್ತು. ಅವನಿರುವ ಗವಿಯನ್ನು ಅರಸುತ್ತ ಹೋಗಿ, ಅವನೊಡನೆ—'ಗೀತಾಧರಾ! ಯುವನ ವೀರರು ಪ್ರಭಾಮಂಡಲಕ್ಕೆ ಹೊಂದೊವಲಿಗಾಗಿ ಹೊರಟಿದ್ದಾರೆ. ನೀನೂ ವೀಣೆಯನ್ನು ಹಿಡಿದುಕೊಂಡು ಅವರೊಂದಿಗೆ ಬರಬೇಕಾಗಿದೆ. ಅದು ದರಿಂದ ತಡಮಾಡದೆ ಹೊರಡು!'—ಎಂದನು.

ಗೀತಾಧರನು ನಿಟ್ಟುಸಿರಿಟ್ಟು—'ಹಾಹಾ! ಅಸ್ಸಪತಿಯ ಬಳಿಯಿಂದ ಬಂದವನು ಎಲ್ಲೆಲ್ಲಿ ಅಲೆದನೂ ಯಾರು ಬಲ್ಲ? ಅದರ ಆಯಾಸವು ಎಷ್ಟೆಂದು ಹೇಳಲಿ! ನಮ್ಮ ತಾಯಿಯು ನನಗೆ ಕರುಣಿಸಿರುವ ಈ ಜಾಣ್ಮೆಯೂ, ಶಾರೀ ರವೂ ನಿರರ್ಥಕವೇ ಸರಿ! ನನ್ನ ಹಾಡಿನಿಂದ ನರಕದ ನಾಯಿಗಳನ್ನು ಕೂಡ ಮರುಳುಮಾಡಿ, ಮಡಿದುಹೋದ ನನ್ನ ಪ್ರಿಯತಮೆಯನ್ನು ಹಿಂದಕ್ಕೆ ಪಡೆದು ಕೊಂಡುದೂ ನಿರರ್ಥಕವೆ ಆಗಿಹೋಯಿತು! ಅದೇ ದಿನ ಅವಳು ಪುನಃ ಮಡಿ ದುಹೋದಳು! ಆ ಮೇಲೆ ನಾನು ಹುಚ್ಚನಂತೆ ದೇಶದೇಶಗಳಲ್ಲಿ ಅಲೆದೆನು. ಬಗೆಬಗೆಯ ಕಷ್ಟಗಳನ್ನು ಸಹಿಸಿದೆನು. ಮರ, ಕಲ್ಲು, ಮನುಷ್ಯ—ಎನ್ನದೆ, ಸಕಲ ವಸ್ತುಗಳನ್ನೂ ನನ್ನ ಹಾಡಿನಿಂದ ಮರುಳುಮಾಡಿ, ಶಾಂತಿಯನ್ನು ಹರ ಡಿದೆನು. ಆದರೆ ನನಗೆ ಮಾತ್ರ ತಿಲಾಂಶವೂ ಶಾಂತತೆಯಿಲ್ಲ! ಆ ನನ್ನ ತಾಯಿ ಗೀತಿಕೆಯು, ಮಮತೆಯಿಂದ ನನ್ನನ್ನೆಳೆದುಕೊಂಡು ಬಂದು ಇಲ್ಲಿ ಕುಳ್ಳಿರಿಸಿ ದಳು. ಈ ಕಾಡು ಜನರ ಮನಸ್ಸನ್ನು ಮೃದುಮಾಡುವ ಕೆಲಸವನ್ನು ಹಿಡಿದಿ

ದ್ದೇನೆ. ಆದರೆ ಈಗ ನಾನು ಪುನಃ ದೇಶಾಟನೆಗೆ ಹೊರಡಬೇಕಾಗಿದೆಯಂತೆ! ಕಣ್ಣು ಕಾಣದ ದೇಶ! ಪೂರ್ವಸಾಗರದ ಕೊನೆ! ಇರಲಿ, ಚಿಂತಿಲ್ಲ. ಮಿತ್ರನ ಮಾತನ್ನು ಮೀರಬಾರದು. ಇದೊ! ಹೊರಟೆ!'—ಎಂದು ಹೇಳಿ ಸುಧಾಕರನನ್ನು ಪಡುವಲು ಕರೆದುಕೊಂಡು ಹೋದನು. ಶತದ್ರು ನದಿಯನ್ನು ದಾಟಿ ವಾಣೀವಿಲಾಸವನ್ನು ಸೇರಿದರು. ಅಲ್ಲಿ ತಾರಾದೇವಿಯನ್ನು ಸ್ಮರಿಸಿ, ಪವಿತ್ರವಾದ ವಟವೃಕ್ಷದಿಂದ ಒಂದು ಕೊಂಬೆಯನ್ನು ಕಿತ್ತುಕೊಂಡು ಬಂದರು. ಅಲ್ಲಿಂದ ನೆಟ್ಟಗೆ ಇಳಾವರ್ತಕ್ಕೆ ಬಂದು, ಆ ಕೊಂಬೆಯನ್ನು ನಾವೆಯ ಮುಂಭಾಗದಲ್ಲಿ ನಟ್ಟರು.

ಪ್ರಯಾಣಕ್ಕೆ ಅಣಿಯಾದ ಮೇಲೆ ಆ ನಾವೆಯನ್ನು ನೀರಿಗೆಳೆಯುವುದು ಕಷ್ಟವಾಗಿ ಕಂಡಿತು. ಮರಳಲ್ಲಿ ಹೂತುಹೋಗಿ ಕೊಂಚವೂ ಅಲುಗಾಡಲಿಲ್ಲ. ವೀರರು ಕಣ್ಣುಕಣ್ಣು ಬಿಡತೊಡಗಿದರು. ಆಗ ಸುಧಾಕರನು—'ಈ ಕೊಂಬೆಯನ್ನು ಕೇಳೋಣ! ಅದರಿಂದೇನಾದರೂ ಸಹಾಯ ದೊರಕೀತು!'—ಎಂದು ಹೇಳಿದನು.

ಆ ಕ್ಷಣವೆ ಕೊಂಬೆಯಿಂದ ಮಾತು ಹೊರಟಿತು.—'ಗೀತಾಧರನು ಚಾತುರ್ಯ ತೋರಲಿ! ಹಾಡಿಗೆ ಕೊರಡು ಹಾಸಲಿ!'—ಎಂದು ನುಡಿಯಿತು.

ವೀರರು ಕೊರಡುಗಳನ್ನು ಹಾಸಿದರು. ಗೀತಾಧರನು ವೀಣೆಯನ್ನು ನುಡಿಸುತ್ತ ಹಾಡತೊಡಗಿದನು.

"ಜಲವು ಮುಂಗಡೆ ನೆಲವು ಹಿಂಗಡೆ ಅಲೆಯನಾಲಿಸಿ ಧಿಂಕಿಡೆ ।
ಬಲುಮೆಯುಳ್ಳವೆ ಒಲುಮೆಯುಳ್ಳವೆ ನಲವು ಬಾರದೆ ಬಾರದೆ ॥
ಜಲಚರಂಗಳ ಬಳಗವಂಜುತೆ ಜಳಕವಾಡಿರಲಾಡದೆ ।
ಸುಲಭವಾಗಿರಲರಸು ಕೀರ್ತಿಯು ಕನಕ ಚರ್ಮದ ಲಾಭದೆ ॥"

ಅಷ್ಟರಲ್ಲಿ ನಾವೆಯು ನಡುಗಿದಂತಾಯಿತು! ಗೀತಾಧರನು ಮುಂದುವರಿಸಿದನು:

"ತೆರೆಯು ತುರುಗಲು ನೊರೆಯು ಮಿರುಗಲು ನೆರೆಯಲಾರೆಯು ನೀರಲಿ ।
ನೀರಿನಾಕರ ತೀರದಾ ಪುರವಾರವೆಲ್ಲವ ನಿರುಕಿಸೆ ॥
ಸರಳತನದಲಿ ಸರಿಯಲಾಗದೆ ಸಲಹಲಾಗದೆ ವೀರರ ।
ತಾರಿಣೀರಮೆ ನೀರನೇರಲಿದೇಕೆ ತಾಮಸ ತೋರುವೆ ॥"

ಎಂದು ಹಾಡುತ್ತಿರುವಷ್ಟಕ್ಕೆ ತಾರಿಣಿಯು ಚಿಗರಿಯಂತೆ ಹಾರಿಕೊಂಡು ಹೋಗಿ ಕಡಲಲ್ಲಿ ನಿಂತಿತು.

ಆಮೇಲೆ ವೀರರು ಅದರೊಳಗೆ ತಿಂಡಿಯನ್ನೂ ನೀರನ್ನೂ ತುಂಬಿ, ತಮ್ಮ ತಮ್ಮ ಎಡೆಗಳಲ್ಲಿ ಕುಳಿತು, ಅರಿತ್ರಗಳಿಗೆ ಕೈಗೊಟ್ಟರು. ಗೀತಾಧರನು ಗಾನಕ್ಕೆ ತೊಡಗಿದನು. ನಾವೆಯು ದಕ್ಷಿಣಾಭಿಮುಖವಾಗಿ ಸರಸರನೆ ಹೋಗುತಿತ್ತು. ಜನರೆಲ್ಲರೂ ಸಾಲುಗಟ್ಟಿ ನಿಂತುಕೊಂಡು ನೋಡುತಿದ್ದರು. ಆದರೆ ಅವರಲ್ಲಿ ಉತ್ಸಾಹವು ಗಂಡಸರಲ್ಲಿ ಹಿಗ್ಗಿಕೊಂಡಿತ್ತು, ಹೆಂಗುಸರಲ್ಲಿ ಕುಗ್ಗಿಕೊಂಡಿತ್ತು!

---

## V

ಒಪ್ಪೊತ್ತಿನ ಹಾದಿ ಸಾಗಿದ ಮೇಲೆ ಒಂದು ನಡುಗುಡ್ಡೆಯಲ್ಲಿಳಿದುಕೊಂಡರು. ಹಿತಕರವಾದ ಗಾಳಿಯು ಬೀಸುವ ತನಕ ಅಲ್ಲಿಯೆ ನಿಲ್ಲಬೇಕಾಯಿತು. ಈಗ ಈ ಜೈತ್ರಯಾತ್ರೆಗೆ ನಾಯಕನೊಬ್ಬನು ಬೇಕಷ್ಟೆ? ವಜ್ರಾಂಗನ ವಜ್ರಕಾಯವನ್ನೂ ಶಕ್ತಿಯನ್ನೂ ಕಂಡು ಆತನೆ ನಾಯಕನಾಗಲೆಂದು ಹಲವರ ಮತ. ಆದರೆ ಸುಧಾಕರನು ಎಲ್ಲರಿಗಿಂತಲೂ ಬುದ್ಧಿಶಾಲಿಯಾಗಿದ್ದುದರಿಂದ ಆತನೆ ಆಗ ಬೇಕೆಂದು ವಜ್ರಾಂಗನ ಮತ. ಕೊನೆಗೆ ಈ ಯಾತ್ರೆಗೆ ಸುಧಾಕರನೆ ಮೂಲನಾಗಿದ್ದುದರಿಂದ ಆತನನ್ನೆ ನಾಯಕತ್ವಕ್ಕೆ ಆಯ್ದುಕೊಂಡರು. ಗೀತಾಧರನು ಒಂದು ಎತ್ತನ್ನು ಹಿಡಿದು ತಂದು, ತಾರಾದೇವಿಗೆ ಬಲಿಗೊಟ್ಟನು. ಎಲ್ಲ ವೀರರೂ ಅದರ ಸುತ್ತಲೂ ನಿಂತು, ಅದರ ದೇಹದೊಳಕ್ಕೆ ಕತ್ತಿಯನ್ನು ಹಿರಿದರು. ಆ ಮೇಲೆ ಗೀತಾಧರನು ಒಂದು ತಟ್ಟೆಯಲ್ಲಿ ಆ ಎತ್ತಿನ ರಕ್ತವನ್ನು ತುಂಬಿ, ಗೋದಿಯ ಹಿಟ್ಟನ್ನೂ ಮಧುವನ್ನೂ ಬೆರೆಸಿ, ಸಮುದ್ರದ ಉಪ್ಪು ನೀರನ್ನು ಹೊಯಿದು, ಅದನ್ನು ಎಲ್ಲರೂ ಸೇವಿಸಿ ಪ್ರಮಾಣ ಮಾಡುವಂತೆ ಹೇಳಿದನು. ವೀರರೆಲ್ಲರೂ ಹಾಗೆಯೆ ಮಾಡಿದರು. ಹೊಂದೊವಲಿನ ಹಂಬಲಲ್ಲಿ ತಾವು ಸುಧಾಕರನಿಗೆ ಸಹಾಯಕರಾಗುವುದೆಂದೂ, ಯಾರಿ ನಡೆದವನು ಅಧೋಗತಿಗಿಳಿಯಲೆಂದೂ ಸೂರ್ಯಸಾಕ್ಷಿಯಾಗಿ ಪ್ರಮಾಣ ಮಾಡಿದರು.

ತರುವಾಯ ಸುಧಾಕರನು ಕಟ್ಟಿಗೆಯೊಟ್ಟಿ ಎತ್ತಿನ ಹೆಣವನ್ನು ಸುಟ್ಟನು. ವೀರರೆಲ್ಲರೂ ಹಡಗು ಹತ್ತಿದರು. ಸ್ಥಿರಚಿತ್ತರಾಗಿ ಮೂಡುಗಡೆ ನಡೆಯಿಸಿದರು. ಕೆಲವು ದೂರ ಹೋದ ಮೇಲೆ ಬಡಗಡೆ ಗಂಧರ್ವಗಿರಿಯು ಕಾಣಿಸಿತು. ಚಿಕ್ಕಂದು ತಾವು ಓಡಿಯಾಡಿದ್ದ ತಾಣವನ್ನು ಕಂಡು ಅವರ ಹೃದಯವು ಕರಗಿತು. ಅಪರಾಜಿತನು—'ಮಿತ್ರರಿರಾ! ನಾವು ಹೊರಟರುವುದು ತುಂಬ ಸಾಹಸಿಕವಾದ ಕಾರ್ಯಕ್ಕೆ. ಎಲ್ಲರೂ ಬದುಕಿಕೊಂಡು ಬಂದೇವೆಂಬ ನಂಬುಗೆಯಿಲ್ಲ. ಗಂಭರ್ವಗಿರಿಯನ್ನು ಪುನಃ ಸಂದರ್ಶಿಸುವ ಸಂಭವ ಇಲ್ಲದೆ ಇರಬಹುದು. ಆದುದರಿಂದ ಇಲ್ಲಿ ಇಳಿದು, ಗಿರಿಯನ್ನೇರಿ, ಗುರುವರ್ಯನಾದ ಅಶ್ವಪತಿಯ ಅಡಿಗಳಿಗೆರಗಿ, ಆಶೀರ್ವಾದ ಪಡೆಯುವುದು ಲೇಸು. ಅದೂ ಅಲ್ಲದೆ ನನ್ನ ಚಿಕ್ಕ ಮಗನೊಬ್ಬನು ಇಲ್ಲಿದ್ದಾನೆ. ನನ್ನ ಪತ್ನಿ ಸಾಗರಿಕೆಯನ್ನು ಕೇಳಿ ಬಲ್ಲಿರಷ್ಟೆ? ಅವಳು ಅಪ್ಸರೆ. ಒಂದು ಸಲ ಕಡಲ ತಡಿಗೆ ಹೋಗಿದ್ದಾಗ ಒಂದು ಗವಿಯೊಳಕ್ಕೆ ಕಾಣಸಿಕ್ಕಿದಳು. ಆಕೆ ಕಾಮರೂಪಿಣಿ ಬಲ್ಲಿರಾ! ನಾನು ಹತ್ತಿರ ಹೋದೊಡನೆಯೆ 'ನಾರಿ' ಹೋಗಿ 'ವಾರಿ' ಆದಳು! ಅಲ್ಲಿಂದ ಆವಿಯಾದಳು! ಆವಿ ಹೋಗಿ ಬೆಂಕಿಯಾಯಿತು! ಬೆಂಕಿ ಹೋಗಿ ಬಂಡೆಯಾಯಿತು! ಸಿಂಗವಾಯಿತು! ಕೊನೆಗೊಂದು ಮರವಾಯಿತು! ಏನಾದರೂ ನಾನಾಕೆಯ ಬೆನ್ನು ಬಿಡಲಿಲ್ಲ. ತನ್ನ ನಿಜರೂಪಕ್ಕೆ ಬರುವ ತನಕವೂ ಸಾಧನೆ ಮಾಡಿದೆನು. ಕೊನೆಗೆ ಹೇಗೆ ಹೇಗೊ ಆಕೆಯನ್ನು ಒಲಿಸಿಕೊಂಡು, ಅರಮನೆಗೆ ಕರೆದುಕೊಂಡು ಹೋದೆನು. ಬಹಳ ಸಂಭ್ರಮದಿಂದ ಮದುವೆಯಾಯಿತು. ನರನಿಗೂ ಅಪ್ಸರೆಗೂ ಮದುವೆಯಲ್ಲವೆ? ದೇವಗಿರಿಯಿಂದ ದೇವತೆಗಳು ಕೂಡ ಬಂದಿದ್ದರು. ಅವಳಲ್ಲಿ ಒಂದು ಗಂಡು ಮಗು ಹುಟ್ಟಿತು. ಆ ಮಗನನ್ನು ಇಲ್ಲಿಗೆ ಗುರುಕುಲವಾಸಕ್ಕೆ ಕಳುಹಿದ್ದೇನೆ. ಅವನನ್ನು ನೋಡಿ ಹೋಗಬೇಕೆಂಬ ಲವಲವಿಕೆಯೂ ತುಂಬ ಇರುವುದು. ಹೇಗೂ ಇರಲಿ. ಇಲ್ಲಿ ಇಳಿಯೋಣ'—ಎಂದನು.

ಈ ಮಾತುಗಳನ್ನು ಕೇಳಿ, ಕರ್ಣಧಾರಿಯಾದ ಕರ್ಣದತ್ತನು ನಾವೆಯನ್ನು ದಡಕ್ಕೆ ತಿರುಗಿಸಿದನು. ಎಲ್ಲರೂ ಹಡಗಿಳಿದು ಗಿರಿ ಹತ್ತಿದರು. ಅಶ್ವಪತಿಯು ಸಾಗರಿಕೆಯ ಕುಮಾರನಿಗೆ ವೀಣೆ ನುಡಿಸಲು ಕಲಿಸಿಕೊಡುತಿದ್ದನು. ಆ ಬಾಲಕನು ಕೂಡ ಮೃದುವಾಗಿ ನುಡಿಸುತಿದ್ದನು.

ತನ್ನ ಪೂರ್ವಶಿಷ್ಯರ ತಂಡವನ್ನು ಕಂಡೊಡನೆಯೆ ಅಶ್ವಪತಿಯು ಸಂತೋಷದಿಂದ ಹಾರಿ ಬಂದು, ಎಲ್ಲರನ್ನೂ ಆಲಿಂಗಿಸಿ, ಯೋಗಕ್ಷೇಮವನ್ನು ವಿಚಾರಿಸಿಕೊಂಡನು. ಆ ಮೇಲೆ ಅವ್ರುತಣವಾಯಿತು. ಉಂಡು ತಿಂದು ತೇಗಿದನಂತರ ಗೀತಾಧರನನ್ನು ಹಾಡುವುದಕ್ಕೆ ಹೇಳಿದರು. ಆದರೆ ಗುರುವಿನಿದಿರಿಗೆ ಸಲ್ಲದೆಂದು ಅವನೊಪ್ಪಲಿಲ್ಲ. ಅಶ್ವಪತಿಯು ಸ್ವತಃ ವೀಣೆ ನುಡಿಸಿ ಹಾಡಬೇಕಾಯಿತು. ಗಂಧರ್ವರಿಗೂ ಅಶ್ವಕುಲದವರಿಗೂ ಘೋರ ಸಂಗ್ರಾಮವು ಹೇಗೆ ನಡೆಯಿತು, ಗಂಧರ್ವರು ಹೇಗೆ ಮದಿರೆಯಿಂದ ಮಡಿದರು, ಮತ್ತರಾಗಿದ್ದಾಗ ಮುಷ್ಟಿಯಿಂದಲೂ, ಹಲ್ಲುಗಳಿಂದಲೂ, ಹಿಡಿದಿದ್ದ ಗಿಂದಲುಗಳಿಂದಲೂ ಹೇಗೆ ಕಾದಾಡಿದರು, ಸಿಟ್ಟಿನ ಭರದಲ್ಲಿ ಮರಗಳನ್ನು ಕಿತ್ತು ಕಲ್ಲುಗಳನ್ನು ಉರುಳಿಸಿ ಹೇಗೆ ನೆಲವನ್ನು ಹಾಳುಗೆಡವಿದರು, ಕೊನೆಗೆ ಹೇಗೆ ಊರು ಬಿಟ್ಟು ಓಡಿದರು—ಇವೇ ಮೊದಲಾದ ವಿಷಯುಗಳು ಆತನ ಕವನದಲ್ಲಿ ಅಡಕವಾಗಿದ್ದವು. ಇದನ್ನು ಕೇಳಿ ವೀರರ ಹೃದಯವು ಉಕ್ಕಿ ಬಂತು. ಆ ಕದನದ ಸೋಲು ಗೆಲುವಿಗೆ ಭಾಗಿಗಳಾಗಿದ್ದ ವೀರರು ಕೂಡ ಅವರಲ್ಲಿ ಕೆಲವರಿದ್ದರು.

ಆ ಮೇಲೆ ಗೀತಾಧರನ ಸರದಿ ಬಂತು. ಪ್ರಳಯದ ಭೀಕರತೆ, ಲೋಕನಿರ್ಮಾಣ, ಪ್ರೇಮದ ಮಹತ್ವ—ಈ ತತ್ವಗಳು ಆತನ ಹಾಡಿನಲ್ಲಿ ಪ್ರತಿಪಾದಿತವಾಗಿದ್ದವು. ಹಾಡುತ್ತ ಹಾಡುತ್ತ ಆತನ ಶಾರೀರವು ಏರುತ್ತ ಹೋಯಿತು. ಈತನ ಹಾಡಿಗೆ ನೊಂತು ಮರಗಳು ಬಾಗಿದವು, ಕಲ್ಲುಗಳು ಕರಗಿದವು, ಮೃಗಗಳು ನೆರೆದವು, ಹಕ್ಕಿಗಳು ಹತ್ತಿರ ಬಂದವು! ಅಶ್ವಪತಿಯು ಕುಳಿತಲ್ಲಿ ಕುಳ್ಳಿರಲಾರದೆ, ನಿಂತಲ್ಲಿ ನಿಂತಿರಲಾರದೆ ಅತ್ತಿತ್ತ ಕುಣಿಯತೊಡಗಿದನು! ಜಗತ್ತೆ ಆನಂದಮಯವಾಗಿ ಹೋಯಿತು!

ಆ ಮೇಲೆ ಹೊರಡುವ ಹೊತ್ತಾಯಿತು. ಅಪರಾಜಿತನು ಮಗನನ್ನು ಮುತ್ತಿಟ್ಟನು. ಅಶ್ವಪತಿಯು ಹಡಗಿನ ತನಕ ಬಂದು ಶಿಷ್ಯರನ್ನು ಆಲಿಂಗಿಸಿದನು, ಆಶೀರ್ವದಿಸಿದನು. ಆ ಶಿಷ್ಯರಿಗೆ ಆತನ ಸರಳತೆಯನ್ನು ಕಂಡು, ಜಾಣ್ಮೆಯನ್ನು ಎಣಿಸಿ, ಅಳು ಬಂತು.

ಹಡಗು ಹೊರಟಿತು. ಅಶ್ವಪತಿಯು ಬಂಡೆಯ ಮೇಲೆ ನಿಂತುಕೊಂಡು ಮೊಗವೆತ್ತಿ, ಶಿಷ್ಯರ ಸುಖಾಗಮನಕ್ಕಾಗಿ ದೇವರಲ್ಲಿ ಮೊರೆಯಿಡತೊಡಗಿದನು.

ಕಾಣುವಲ್ಲಿ ವರೆಗೂ ಶಿಷ್ಯರು ಆತನನ್ನೆ ನೋಡುತಿದ್ದರು. ಕಣ್ಮರೆಯಾಗುತ್ತಲೆ ತಮಗಾತನ ಪುನರ್ದರ್ಶನವಾಗುವುದು ದುರ್ಲಭವೆಂದು ಅವರಲ್ಲಿ ಸಂದೇಹ ಹುಟ್ಟಿತು. ಹೃದಯವು ಕಂಪಿಸಿತು.

ಈ ರೀತಿ ಚಿಂತಾವಶರಾಗಿ ಮಾತನಾಡದೆ ಹಡಗನ್ನು ನಡೆಯಿಸಿದರು. ಬಲು ದೂರ ಸಾಗಿತು. ಹಲವು ದ್ವೀಪಗಳು ದಾಟಿದವು. ಕೊನೆಗೊಂದು ದ್ವೀಪದಲ್ಲಿ ಇಳಿದರು. ಅಲ್ಲಿಗೆ ಕಾಮಪಾಲನೆಂಬವನು ರಾಜನು. ಕಾಮಪಾಲನ ತಂದೆಯು ಅಶ್ವಪತಿಯ ಶಿಷ್ಯನಾಗಿದ್ದನು. ಆದುದರಿಂದ ತನ್ನ ತಂದೆಯ ಗುರುಬಂಧುಗಳನ್ನು ಕಂಡೊಡನೆಯೆ ಅವರನ್ನು ಸಂತೋಷದಿಂದ ಇದಿರುಗೊಂಡು ಕರೆದುಕೊಂಡು ಹೋಗಿ ಉಪಚರಿಸಿದನು. ಅವರಿಗೆ ಬೇಕಷ್ಟು ಕಾಳನ್ನೂ ನೀರನ್ನೂ ತುಂಬಿಕೊಟ್ಟು, ಅವರನ್ನು ಬೀಳುಗೊಟ್ಟನು. ಆದರೆ ರಾತ್ರಿಕಾಲದಲ್ಲಿ ಎಲ್ಲರೂ ಮಲಗಿದ್ದಾಗ ದೈತ್ಯರ ಧಾವಳಿ ಬಂತು. ಆ ದೈತ್ಯರು ಅರುದೋಳವರು. ಚಿಕ್ಕ ಚಿಕ್ಕ ಮರಗಳೆ ಅವರ ಆಯುಧಗಳು! ವಜ್ರಾಂಗನು ನಂಜಿನ ಸರಳುಗಳಿಂದ ಬೆಳಕು ಹರಿಯುವ ಮುಂಚೆಯೆ ಅವರನ್ನು ನಿರ್ಮೂಲ ಮಾಡಿದನು. ಆದರೆ ಆ ಕತ್ತಲಲ್ಲಿ ದಯಾಶೀಲನಾದ ಕಾಮಪಾಲನು ಕೂಡ ಈತನ ಬಾಣಕ್ಕೆ ಆಹುತಿಯಾಗಿದ್ದುದು ಗೊತ್ತಾಗಲಿಲ್ಲ.

ಆ ಮೇಲೆ ಎಲ್ಲರೂ ಹಡಗು ಹತ್ತಿದರು. ಅರಿತ್ರಗಳಿಗೆ ಕೈಗೊಡುವಂತೆ ಹೇಳಿ ಕರ್ಣದತ್ತನು ಹಡಗನ್ನು ನಡುಗಡಲಿಗೆ ತಿರುಗಿಸಿದನು. ಅಷ್ಟರಲ್ಲಿ ಬಿರುಗಾಳಿ ಬರತೊಡಗಿತು. ತಾರಿಣಿಯು ಸುತ್ತು ಸುತ್ತು ತಿರುಗಿತು. ಏನು ಮಾಡಿದರೂ ಮುಂದಕ್ಕೆ ಹಾಯದು. ಇದನ್ನು ಕಂಡು ತಮ್ಮ ಮೇಲೆ ದೇವರು ಮುನಿದಿರಬೇಕೆಂದು ಕರ್ಣಧಾರನು ಅಭಿಪ್ರಾಯ ಪಟ್ಟನು. ಸುಧಾಕರನು ಆ ದೈವಿಕವಾದ ಕೊಂಬೆಯೊಡನೆ ಸಲಹೆ ಕೇಳಿದನು. 'ಮಿತ್ರವಧವೆ ಇದಕ್ಕೆ ಕಾರಣ! ಕಾಮಪಾಲನ ಸಂಸ್ಕಾರವಾಗದೆ ನಿಮಗೆ ನಿರ್ವಾಹವಿಲ್ಲ!' ಎಂಬ ದನಿಹೊರಟಿತು!

ಸುಧಾಕರನು ಚಿಂತೆಗೊಂಡು ಅನುಯಾಯಿಗಳಿಗೆ ಈ ಸುದ್ದಿಯನ್ನು ತಿಳುಹಿದನು. ಎಲ್ಲರೂ ಹಡಗಿಂದಿಳಿದು ಬೆಳಗುತನಕವೂ ಕಾಮಪಾಲನ ಹೆಣವನ್ನು ಹುಡುಕಿದರು. ಆ ದೈತ್ಯರ ದೇಹಗಳ ಎಡೆಯಲ್ಲಿ ರಕ್ತದಿಂದ ತೊಯಿದು ಹೋಗಿ, ಧೂಳಿನಿಂದ ಮುಸುಕಿದ್ದ ಆತನ ದೇಹವು

ದೊರೆಯಿತು. ತಮಗಾತನು ತೋರಿದ್ದ ದಯೆಯನ್ನೆಣಿಸಿಕೊಂಡು ಎಲ್ಲರೂ ಮರುಗಿದರು. ಕೊನೆಗಾ ಶವವನ್ನು ಕಲ್ಲ ಹಾಸುಗೆಯ ಮೇಲಿರಿಸಿ, ಮಣ್ಣು ಮುಚ್ಚಿ ಮರೆಮಾಡಿ, ಕರಿಕುರಿಯನ್ನು ಬಲಿಗೊಟ್ಟರು. ಗೀತಾಧರನು ಮಾಯಾಗೀತವನ್ನು ಹಾಡಿನುಡಿಸಿದನು. ಆಗಿನ ಪದ್ಧತಿಯಂತೆ ಬಗೆಬಗೆಯ ಆಟಗಳನ್ನಾಡಿದರು. ಸುಧಾಕರನು ಎಲ್ಲರಿಗೂ ಬಹುಮಾನಗಳನ್ನು ಹಂಚಿದನು.

ಚೆನ್ನಾಗಿ ಹೆಣಗಿದ ಗ್ರಹಮಿತ್ರನಿಗೊಂದು ಹೊಂಬಟ್ಟಲು ಸಿಕ್ಕಿತು. ಬಲದಲ್ಲಿ ಮೇಲಾದ ವಜ್ರಾಂಗನಿಗೆ ಬೆಳ್ಳಿಯ ತಟ್ಟೆಯು ದೊರೆಯಿತು. ಅತ್ಯಂತ ವೇಗವಾಗಿ ಕುದುರೆಯೋಡಿಸಬಲ್ಲ ತೀವ್ರಗಮನನಿಗೆ ಚಿನ್ನದ ಕಿರಿಟ ದೊರೆಯಿತು. ವೇಗಚಾಲಕನು ಬಲು ಚೆನ್ನಾಗಿ ಕೈಕೈಕಾದಿದುದರಿಂದ ಅವನಿಗೊಂದು ರತ್ನಕಂಬಳಿ ಸಿಕ್ಕಿತು. ಗೀತಾಧರನಿಗೆ ಹಾಡಿನ ಸಲುವಾಗಿ ಚಿನ್ನದ ಗರಿಯಾವುಗೆಗಳು ದೊರೆತವು. ಅಂಬೆಸೆವುದರಲ್ಲಿ ಬಲುಜಾಣನಾಗಿದ್ದ ಸುಧಾಕರನಿಗೆ ಅಮೂಲ್ಯವಾದೊಂದು ಹೂ! ಇನ್ನೂ ಹಲವರಿಗೆ ಹಲವು ಬಗೆಗಳು ದೊರೆತವು. ಇಷ್ಟೆಲ್ಲವೂ ಮಾಡಿದುದರಿಂದ ಕಾಮುಪಾಲನ ಆತ್ಮಕ್ಕೆ ಶಾಂತಿ ದೊರೆಯಿತಂತೆ! ಆ ದೊರೆಯ ಪತ್ನಿಯು, ಪತಿಯು ಮಡಿದನೆಂದು ಕೇಳುತ್ತಲೆ, ಕಣ್ಣೀರಿಟ್ಟು ತಾನು ಕೂಡ ಮಡಿದಳಂತೆ. ಆಕೆಯ ಕಣ್ಣೀರು ಸುರಿಸುರಿದು, ಕಾಲುವೆಯಂತೆ ಬಳೆದು, ಎಂದೂ ಬತ್ತದೆ ಇಂದೂ ಹರಿಯುತ್ತಿದೆಯಂತೆ!



## VI

ಅಲ್ಲಿಂದ ಆ ವೀರರು ಕಡಲ ತಡಿಯನ್ನು ಬಿಡದೆ ಮುಂದುಮುಂದಕ್ಕೆ ಹೋದರು. ದೊಡ್ಡದೊಂದು ನದಿಯು ಸಾಗರವನ್ನು ಸೇರಿತ್ತು. ಅದನ್ನೂ ದಾಟಿ ಮುಂದಕ್ಕೆ ಹೋದರು. ಕೊನೆಗೆ ಬಿರುಗಾಳಿಯಿಂದ ಮರೆಯಾಗಿದ್ದೊಂದೆಡೆಯಲ್ಲಿ ಹಡಗನ್ನು ನಿಲಿಸಿ, ಹಾಯಿಮಡಿಚಿ ಕಟ್ಟಿದರು. ನಿಚ್ಚಣಿಕೆಯನ್ನು ಕೆಳಗಿಳಿಸಿ, ಎಲ್ಲರೂ ವಿನೋದ ವಿಶ್ರಾಂತಿಗಳ ಸಲುವಾಗಿ ದಡಕ್ಕಿಳಿದು ಹೋದರು.

ವಜ್ರಾಂಗನು ಎರಳೆ ಸಿಕ್ಕುವುದೊ ನೋಡಬೇಕೆಂದು ಬಿಲ್ಲುಬಾಣ ಗಳನ್ನು ಹಿಡಿದುಕೊಂಡು ಹೊರಟನು. ಅವನ ಶಿಷ್ಯನೂ ಗುರುವನ್ನೆ ಹಿಂಬಾ ಲಿಸಿದನು. ಆ ಹುಡುಗನಿಗೆ ಹಾದಿ ತಪ್ಪಿ ಹೋಯಿತು. ಎಲ್ಲಿಯೊ ಹಳುವಿ ನೊಳಗೆ ಸಿಲುಕಿಕೊಂಡು ಅಲೆದಲೆದು ದಣುವಾರಿಸಿಕೊಳ್ಳುವುದಕ್ಕಾಗಿ ಒಂದು ಕೊಳದ ಬಳಿ ಮಲಗಿಕೊಂಡನು. ಅಷ್ಟರಲ್ಲಿ ಕೆಲವರು ಅಪ್ಸರೆಯರು ಬಂದು ಆತನ ಚೆಲುವನ್ನು ಕಂಡು, ತಮಗೊಡನಾಡಿಯಾಗಲೆಂದು, ಕೊಳದೊಳಗಿನ ತಮ್ಮ ಅರಮನೆಗೆ ಆತನನ್ನೆತ್ತಿಕೊಂಡು ಹೋಗಿ ಬಿಟ್ಟರು! ಇತ್ತ ವಜ್ರಾಂಗನು ಬಾಲಕನನ್ನು ಕಾಣದೆ, ಕಾಡೆಲ್ಲ ಸುತ್ತಿ, ಹೆಸರು ಹಿಡಿದು ಕೂಗ ತೊಡಗಿದನು. ಆತನ ಬಿರುದನಿಗೆ ಗಿರಿಗುಹೆಗಳು ಪಡಿನುಡಿಗೊಟ್ಟರೂ, ಕೊಳದೊಳಗಿದ್ದ ಹುಡುಗನಿಗೇನೂ ಕೇಳಿಸಲಿಲ್ಲ. ವಜ್ರಾಂಗನು ಮತ್ತೂ ಮತ್ತೂ ಹುಡುಕುತ್ತ ಹೋದನು. ಅಷ್ಟರಲ್ಲಿ ಕಡಲಕಡೆಯಲ್ಲಿ ಯಾನಕ್ಕೆ ಅನುಗುಣವಾದ ಗಾಳಿಯು ಬೀಸತೊಡಗಿತು. ವೀರರೆಲ್ಲರೂ ಹಡಗು ಹತ್ತಿ, ಹಾಯಿ ಬಿಚ್ಚಿದರು. ವಜ್ರಾಂಗನು ಮಾತ್ರ ಹಿಂದುಳಿದು ಹೋದನು. ಅವನ ಗತಿ ಮತ್ತೇನಾಯಿತೊ ಆವರಿಗೆ ತಿಳಿಯದು.

ತಾರಿಣಿಯು ವಾಯು ವೇಗದಿಂದ ಹಾರಿಕೊಂಡು ಹೋಗಿ ಯಾವುದೊ ಒಂದು ರಾಜ್ಯದ ಬಳಿ ನೆಲಮುಟ್ಟಿತು. ಅಲ್ಲಿಗೊಬ್ಬ ದೈತ್ಯನು ದೊರೆಯಾಗಿ ದ್ದನು. ಕೇವಲ ದೈವದ್ರೋಹಿ! ಜಟ್ಟಿಕಾಳೆಗದಲ್ಲಿ ಗಟ್ಟಿಗನು! ಯಾರು ಬಂದರೂ ಕಾಳೆಗಕ್ಕೆ ಕರೆಯುವನು. ಸೋತವರನ್ನು ಕೊಂದೆಬಿಡುವನು. ಇವರನ್ನು ಕಂಡು ಇದಿರಿಸಿದನು. ವೇಗಚಾಲಕನು ಇಂತಹ ವಿದ್ಯೆಯಲ್ಲಿ ತೀರ ಜಾಣನು. ಆದುದರಿಂದ ಆತನು ತಟ್ಟನೆ ಇದಿರಿಗೆ ಚಿಗಿದು ನಿಂತು ಕಾಳೆಗಕ್ಕೆ ತೊಡಗಿದನು. ದೈತ್ಯನ ಶಕ್ತಿಯು ಯುವನನ ಯುಕ್ತಿಗೆ ಈಡಾಗಲಿಲ್ಲ. ಆದುದರಿಂದ ದೈತ್ಯನು ಕೈಸಾಗದೆ ಸಾವಿಗೆ ಎರವಾದನು. ಅಂತಹ ಹೊಲಸು ರಾಜ್ಯದಲ್ಲಿ ನಿಲ್ಲಬಾರದೆಂದು, ವೀರರು ತಾರಿಣಿಯನ್ನು ನಡುನೀರಿಗೆ ದೂಡಿ, ಮುಂದಕ್ಕೆ ನಡೆಯಿಸಿದರು. ಹಲವು ಗಾವುದ ಹೋದಮೇಲೆ ಚಿರಪೀಡನೆಂಬ ರಾಜನ ರಾಜ್ಯವು ಕಾಣಿಸಿತು. ತಾರಿಣಿಯೊಳಗಿನ ವೀರರಲ್ಲಿ ವಾಯುಪುತ್ರ ರಾದ ಮಾರುತಿ ಅತಿವೇಲರು ತಮಗಾ ರಾಜನ ಬಳಿ ಕೆಲಸವಿರುವುದೆಂದು

ಹೇಳಿದರು. ಕೂಡಲೆ ಹಡಗನ್ನು ದಡಕ್ಕೆ ಚಾಚಿ, ಎಲ್ಲರೂ ಇಳಿದು, ನಗರದ ಕಡೆ ಹೊರಟರು.

ಈ ಸುದ್ದಿಯನ್ನು ಕೇಳಿ ಚಿರಪೀಡನು ಬಂದು ಇವರನ್ನಿದಿರುಗೊಂಡು—'ಬನ್ನಿರಿ! ವೀರರೆ! ಬನ್ನಿರಿ! ನಮ್ಮದೇನೊ ಸೊಗಸು ರಾಜ್ಯವಲ್ಲ! ಗಾಳಿಯಿಂದ ಕೋಳುಗೊಂಡಿದೆ! ಚಳಿಯಿಂದ ಕಾಳುಹೋಗಿದೆ! ಆದರೂ ಯಥಾಶಕ್ತಿ ಆತಿಥ್ಯವನ್ನು ಮಾಡುವೆನಂತೆ!'—ಎಂದು ಹೇಳುತ್ತಾ, ಅರಮನೆಯ ಕಡೆಗೆ ಕರೆದುಕೊಂಡು ಹೋದನು. ಅಲ್ಲಿ ಎಲ್ಲರನ್ನೂ ಮಣೆಯಿಕ್ಕಿ ಕುಳ್ಳಿರಿಸಿ ಉಣಬಡಿಸಿದನು. ಆದರೇನಿದು ವಿಚಿತ್ರ! ಕೈಗೆ ಬಂದ ತುತ್ತು ಬಾಯಿಗೆ ಬರ ಬೇಕಾದರೆ, ಭೀಕರ ಸ್ವರೂಪದ ಪ್ರಾಣಿಗಳೆರಡು ಎಲ್ಲಿಂದಲೊ ಹಾರಿಕೊಂಡು ಬಂದು, ಅನ್ನವೆಲ್ಲವನ್ನೂ ಕವರಿಕೊಂಡು ಹೋಗಿ ಬಿಟ್ಟವು! ಚಿರಪೀಡನು ಚಿಂತೆಯಿಂದ—'ಯುವನ ವೀರರಿರಾ! ಕಂಡಿರೇ ನನ್ನೀ ದುರವಸ್ಥೆ! ಮೊಗವನ್ನು ಕಂಡರೆ ಚೆನ್ನೆಯರಂತಿರುವರು! ಉಗುರುಗಳೋ ಹುಲಿಯವು! ರಕ್ಕೆಗಳೊ, ಗರುಡನವು! ಇಂತಹ ವಿಚಿತ್ರ ರೂಪಿಣಿಯರು ವಾಯು ಸಂಬಂಧಿಕೆಯರಾದ ಚಪಲೆಯರು! ರಾತ್ರಿಂದಿವವೂ ಈ ಪರಿ ಕಾಡುತ್ತಿರುವರು. ಹಿಂದೊಂದು ಸಲ ಇವರು ಸುರಮೆ ಸುಕಲೆಯರೆಂಬಿಬ್ಬರು ಮುನಿಕನ್ನೆಯರನ್ನಪಹರಿಸಿ ಕೊಂಡು ಹೋದರು. ಆ ಕನ್ನೆಯರಾದರೊ ಕೇವಲ ಅಪೂರ್ವೆಯರು! ದೇವತೆಗಳೆ ಅವರನ್ನು ಒಲಿದಿದ್ದರು. ವಾರುಣೀದೇವಿಯು ಸುಧಾರಸವಿಕ್ಕಿ ದೇವಗಿರಿಯಲ್ಲಿ ಅವರನ್ನು ಸಾಕಿದ್ದಳು! ವಿದ್ಯಾಧರಿಯು ಕಲೆಗಳನ್ನು ಕಲಿ ಸಿದ್ದಳು! ಇಷ್ಟೆಲ್ಲ ವೈಭವವಿದ್ದರೂ ಮದುವೆಗೆ ನೆರೆಯುತ್ತಲೆ ಈ ಚಪಲೆ ಯರು ಅವರನ್ನೆತ್ತಿಕೊಂಡು ಹೋಗಿ, ಪಾತಾಳದ ರಕ್ಕಸನಿಗೆ ಒಪ್ಪಿಸಿಬಿಟ್ಟರು! ಆ ಚೆನ್ನೆಯರು ಅಲ್ಲಿನ ಯಾತನೆಗಳನ್ನನುಭವಿಸಿಕೊಂಡಿರಬೇಕಾಯಿತು! ಈಗಲಾ ದುಷ್ಟ ಚಪಲೆಯರು ನಮ್ಮನ್ನು ಕಾಡುವುದಕ್ಕೆ ಹಿಡಿದಿದ್ದಾರೆ! ತಡೆಯ ಲಾರದ ಬಿರುಗಾಳಿಗಳನ್ನು ತಂದೊಡ್ಡುತ್ತಾರೆ! ಊಟವನ್ನು ಸೆಳೆದುಕೊಂಡು ಹೋಗುತ್ತಾರೆ! ನಮಗೇನಿದ್ದರೇನು? ನಾವು ನಿರಂತರವೂ ನಿರಾಹಾರಿ ಗಳು!'—ಎಂದು ಅವರ ಚರಿತ್ರೆಯನ್ನು ಆದ್ಯಂತವಾಗಿ ವಿಸ್ತರಿಸಿದನು.

ಆಗ ವಾಯುಪುತ್ರರಾದ ಮಾರುತಿ ಅತಿವೇಲರು ಎದ್ದು ನಿಂತು—'ಅಯ್ಯಾ! ಚಿರಪೀಡರಾಜನೆ! ನಿನಗೆ ನಮ್ಮ ಗುರುತು ಹತ್ತಲಿಲ್ಲವೆಂದು ಕಾಣು

ತ್ತಿದೆ. ನಮ್ಮ ಬೆನ್ನ ಮೇಲೆ ಬೆಳೆದಿರುವ ಈ ಗಂಗಳ ನೆನಪೂ ನಿನಗಿರುವಂತೆ ಕಾಣುವುದಿಲ್ಲ!'—ಎಂದು ಹೇಳಿದರು. ಚಿರಪೀಡನು ಭೀತಿಯಿಂದ ಗಡಗಡ ನಡುಗುತ್ತ ಮೊಗವುಚ್ಚಿಕೊಂಡನು. ಮಾತೇನೂ ಆಡಲಿಲ್ಲ.

ಆಗ ಮಾರುತಿಯು—'ಸರಿ! ನೀನು ಕೇವಲ ವಿಶ್ವಾಸಘಾತುಕಿ! ಆದುದರಿಂದಲೆ ಚಪಲೆಯರು ನಿನ್ನನ್ನು ಕಾಡುತ್ತಿರುವರು. ನಮ್ಮ ಸಹೋದರಿ ಇಂದುಲೇಖೆಯು ಏನಾದಳು? ಆಕೆಯು ನಿನ್ನ ಹೆಂಡತಿಯೆಂಬುದನ್ನೂ ಬಗೆಯದೆ, ಚಿಕ್ಕ ರಾಣಿ ಮಾಯಾವಿನಿಯ ಮಾತಿಗೆ ಮರುಳಾಗಿ, ಆ ಕೋಮಲೆಯನ್ನು ಸೆರೆಯಲ್ಲಿರಿಸಿದೆಯಲ್ಲವೆ? ಅದೂ ಸಾಲದೆ, ಸಿಟ್ಟಿನ ಭರದಲ್ಲಿ ಆಕೆಯ ಮಕ್ಕಳಿಬ್ಬರನ್ನೂ ಕಣ್ಣುಕುಕ್ಕಿ ಕಾಡಿಗೆ ದೂಡಿಸಿದೆ! ಈಗ ನಿನ್ನ ಕರ್ಮದ ಫಲವನ್ನನುಭವಿಸುತ್ತಿರುವೆ! ಇರಲಿ. ಆ ಮಾಯಾವಿನಿಯನ್ನು ಒಳ್ಳೆ ಮಾತಿನಿಂದ ಹೊರಕ್ಕಟ್ಟು! ನಮ್ಮ ಸಹೋದರಿಯನ್ನು ಸೆರೆಯಿಂದುದ್ಧರಿಸು! ಹಾಗೆ ಮಾಡಿದೆಯಾದರೆ ನಿನಗಿರುವ ಚಪಲೆಯರ ಕಾಟವು ತಪ್ಪಿಹೋಗುವಂತೆ ಮಾಡುತ್ತೇವೆ. ಅವರನ್ನು ತೆಂಕಲು ಅಟ್ಟಿ ಬಿಡುತ್ತೇವೆ. ನಾವು ಹೇಳುವಂತೆ ನೀನು ಮಾಡಲೊಲ್ಲೆಯಾದರೆ, ನಿನ್ನ ಮಕ್ಕಳ ಕಣ್ಣನ್ನು ನೀನು ಕುಕ್ಕಿದಂತೆ, ನಿನ್ನ ಕಣ್ಣನ್ನು ನಾವು ಕುಕ್ಕಿ ತೆಗೆದು ಬಿಡುತ್ತೇವೆ!'—ಎಂದು ಗರ್ಜಿಸಿದನು.

ಚಿರಪೀಡನು ಮರುಮಾತಿಲ್ಲದೆ ಮಾಯಾವಿನಿಯನ್ನು ಮನೆಯಿಂದೋಡಿಸಿ ಇಂದುಲೇಖೆಯ ಬಂಧನವನ್ನು ಬಿಡಿಸಿದನು. ಆ ಮಕ್ಕಳನ್ನು ಹುಡುಕಿಸಿ ತರಿಸಿದನು. ಸುಧಾಕರನು ಅವರಿಗೆ ಕಣ್ಣುಬರುವಂತೆ ಮದ್ದುಮಾಯೆಗಳನ್ನು ಮಾಡಿದನು.

ಅಷ್ಟರಲ್ಲಿ ಮಾರುತಿಯೂ ಅತಿನೀಲನೂ ಎದ್ದು ನಿಂತು—'ಅಯ್ಯಾ, ಮಿತ್ರರುಗಳಿರಾ! ಗುರುಬಂಧುಗಳಿರಾ! ಗಂಧರ್ವಗಿರಿಯಲ್ಲಿನ ಒಡನಾಡಿಗಳಿರಾ! ಈಗಲೀಗ ನಾವು ನಿಮ್ಮನ್ನು ತೊರೆದು ಹೋಗ ಬೇಕಾಗುವುದು. ದೈವ ಸಂಕಲ್ಪವು ಹಾಗಿರುವುದು! ಈ ಚಪಲೆಯರನ್ನು ಬೆರಸಿಕೊಂಡು ಹೋಗುವುದು ನಮ್ಮ ಕರ್ತವ್ಯವಾಗಿದೆ. ಹಗಲಿರುಳೆನ್ನದೆ, ಕಾಡುನಾಡೆನ್ನದೆ, ನೆಲಜಲವೆನ್ನದೆ ಇವರನ್ನನುಸರಿಸಿ ಕಾದಬೇಕು. ಸೋಲುಗೆಲುವು ಯಾರು ಬಲ್ಲರು! ಆದರೆ ಸೋಲಿನೊಂದಿಗೆ ಸಾವು ಸಿದ್ಧ!'—ಎಂದು ಹೇಳಿ, ವೀರರೆಲ್ಲರನ್ನೂ ಆಲಿಂಗಿಸಿ ಬೀಳ್ಕೊಂಡು, ಅಂತರಿಕ್ಷಕ್ಕೆ ಚಿಗಿದರು.

ವೀರರು ಮೊಗವೆತ್ತಿ ನೋಡುತಿದ್ದರು. ವಾಯುಪುತ್ರರಿಗೂ ಚಪಲೆಯರಿಗೂ ಕಾದಾಟವು ತೊಡಗಿತು. ಬಗೆಬಗೆಯ ದನಿಗಳು; ರಕ್ಕೆಗಳ ಬಡಿತದ ಅಬ್ಬರವು; ಮುಗಿಲುಗಳ ಓಡಾಟವು; ಇಷ್ಟಲ್ಲದೆ ಮತ್ತೇನೂ ಕಾಣಿಸದು! ಬಿರುಗಾಳಿಯಿಂದಲೂ ಸುಳಿಗಾಳಿಯಿಂದಲೂ ಕಾಡುನಾಡುಗಳು ಅದಿರುತಲಿದ್ದುವು. ದುಂಡಗಿನ ಬಂಡೆಗಳು ಉರುಳಿಕೊಂಡು ಹೋಗುತಿದ್ದುವು. ಆಗಸವೆಲ್ಲವೂ ದೂಳಿನಿಂದ ಮುಸುಕಿತ್ತು. ಕಡಲ ನೀರು ನೊರೆಯಾಗುತಲಿತ್ತು. ಹಗಲೇ ಇರುಳಾಯಿತು!

ಕಾಳಗವು ಬಲುಹೊತ್ತು ನಡೆದನಂತರ ಚಪಲೆಯರು ಕೂಗಿಕೊಂಡು ತೆಂಕಲು ಓಡಿದರು. ವಾಯುಪುತ್ರರು ಅವರನ್ನು ಬೆರಸಿಕೊಂಡು ಹೋದರು. ಹಲವು ದ್ವೀಪಾಂತರಗಳನ್ನು ದಾಟಿದರು. ಕೊನೆಗೆಲ್ಲಿಯೊ ಒಂದೆಡೆ ಆ ಚಪಲೆಯರು ಅವಿತುಕೊಂಡು ಬಿಟ್ಟರು. ಬೆಂಬತ್ತಿ ಬಂದವರು ಅರಸುತ್ತ ಅಲೆಯ ತೊಡಗಿದರು! ಎಷ್ಟು ಕಾಲ ಅರಸಿದರೂ ಚಪಲೆಯರು ದೊರೆಯಲಿಲ್ಲವಂತೆ. ಕೊನೆಗೆ ಆ ಮಾರುತಿಅತಿವೇಲರ ಗತಿಯೇನಾಯಿತೊ ಯಾರೂ ಅರಿಯರು. ಬಿಸಿಲಿನ ಬೇಗೆಯಿಂದ ಬೆಂದು ಬೆಂಡಾಗಿ ಭೂಮಿಗೆ ಬಿದ್ದರೆಂದು ಕೆಲವರ ಅಭಿಪ್ರಾಯ. ವಜ್ರಾಂಗನೊಡನೆ ಕಲಹವಾದಿ ಅವನ ನಂಜಿನ ಸರಳಿಗೆ ಸಿಲುಕಿಕೊಂಡರೆಂದು ಇನ್ನು ಕೆಲವರ ಮತ. ಹೇಗಿದ್ದರೂ ತಾರಿಣಿಯ ವೀರರು ಅವರನ್ನು ಮತ್ತೆಲ್ಲಿಯೂ ಕಂಡುದೇ ಇಲ್ಲ. ಚಪಲೆಯರು ಮಾತ್ರ ಮರೆಯೊಳಗಿದ್ದುಕೊಂಡು ಆಗಾಗ ಕಡಲನ್ನು ಇಂದಿಗೂ ಕದಡುತ್ತಿರುವರಂತೆ!

## VII

ಇತ್ತ ಯುವನ ವೀರರು ಚಿರಪೀಡ ಇಂದುಲೇಖೆಯರಿಂದ ಬೀಳುಗೊಂಡು, ಮುಂದಕ್ಕೆ ಹೋದರು. ಬಲುದೂರ ಮೂಡುಗಡೆ ಹೋದ ಮೇಲೆ ಯಾವ ದಿಕ್ಕಿನಲ್ಲಿಯೂ ತೀರವು ಕಾಣಿಸಲಿಲ್ಲ. ಆಗಲವರಿಗೆ ತಾವು ಬಂದಿರುವುದು ಕಾಲಸಾಗರಕ್ಕೆ ಎಂದು ತಿಳಿದುಬಂತು. ಆ ಕಾಲಸಾಗರದ ವಿಷಯವಾಗಿ ಹಲವು ದಂತಕಥೆಗಳಿದ್ದವು. ಅಲ್ಲಿ ತನಕ ಯಾವ ಯುವನನೂ ಅದನ್ನು ದಾಟುವ ಸಾಹಸಕ್ಕೆ ಹೋಗಿರಲಿಲ್ಲ. ನೀರಿನೊಳಗೆ ಅರೆಗಳ

ಹೊಡೆತ, ಸುಳಿಗಳ ಸುಳಿತ! ಮಂಜು ಮುಸುಕಿತೆಂದರೆ ಪ್ರಯಾಣವು ತೀರ ಪ್ರಯಾಸಕರ! ತನ್ಮಧ್ಯೆ ಹಿಮಗಾಳಿಯು ಬೀಸ ತೊಡಗಿ ಕಡಲ ನೀರೂ ಕುಡಿಯುವ ನೀರೂ ಹೆಂಟೆಗಟ್ಟುವುದುಂಟು! ಇಂತಹ ಕಾಲಸಾಗರವು ಬಡಗುನಾಡಿನ ಅಂತ್ಯದ ತನಕವೂ ಚಾಚಿರುವುದೆಂತಲೂ ಕೊನೆಗೆ ಅಲ್ಲಿ ಇರುಳಲ್ಲದೆ ಹಗಲೆಂಬುದು ಇಲ್ಲವೆ ಇಲ್ಲವೆಂತಲೂ, ಪ್ರೇತಲೋಕದ ಎಲ್ಲೆ ಯೆಂತಲೂ ಹಲವು ಬಗೆಯ ವಾರ್ತೆಯು ಹಬ್ಬಿತ್ತು! ಯುವನ ವೀರರು ಧೀರ ರೆಂಬುದು ದಿಟ! ಆದರೂ ಆ ಅಪಾರವಾದ ಸಾಗರದ ನಡುವೆ ಈ ಸುದ್ದಿ ಗಳನ್ನೆಣಿಸಿಕೊಂಡು ತಲ್ಲಣಿಸ ತೊಡಗಿದರು!

ಅಷ್ಟರಲ್ಲಿ—'ಮಿತ್ರರಿರಾ! ನೀಲಕಲ್ಲುಗಳನ್ನು ನೋಡಿಕೊಂಡಿರಬೇಕು. ಅವುಗಳಿಗೆ ಚಲಿಸುವ ಸಾಮರ್ಥ್ಯವಿರುವುದಂತೆ! ನಮ್ಮನ್ನುನಾದ ಗೀತಿಕೆಯು ಅವುಗಳ ವಿಚಾರವಾಗಿ ಎಚ್ಚರಿಸಿರುವಳು!'—ಎಂದು ಗೀತಾಧರನು ಅವರಿಗೆ ಎಚ್ಚರ ಹುಟ್ಟಸಿದನು.

ಕೊಂಚ ಹೊತ್ತಿನ ಮೇಲೆ, ಮುಗಿಲುಮುಟ್ಟುವ ನೀಲಗಲ್ಲುಗಳು, ಕಡಲ ನಡುವೆ ತುದಿಮೊದಲಿಲ್ಲದ ಗೋಡೆಯಂತೆ ಅಡ್ಡವಾಗಿ ಬಿದ್ದುಕೊಂಡು, ಮೆಲ್ಲನೆ ಅಲೆದಾಡುತ್ತಿರುವುದು ಕಾಣಿಸಿತು. ವೀರರ ಮೈಯು ಜುಮ್ಮೆಂದಿತು. ಮೆಲ್ಲ ಮೆಲ್ಲನೆ ಮುಂದೆ ಹೋದರು. ನೀಲಕಲ್ಲುಗಳು ಕನ್ನಡಿಯಂತೆ ತಳ ತಳಿಸುತಿದ್ದವು. ಅಲೆಗಳೆಡೆಯಲ್ಲಿ ಉರುಳಿಕೊಂಡು ಹೋಗುವುದು ಕಾಣಿಸು ತಿತ್ತು. ಒಂದಕ್ಕೊಂದು ಅರಚಿಕೊಂಡು ಉಂಟಾಗುವ ದನಿಯಿಂದ ಕಿವಿ ಕಿವುಡಾಗುತಿತ್ತು. ಈ ಬಂಡೆಗಳೆಡೆಯಲ್ಲಿ ನೀರು, ದುರುಸಿನಂತೆ ಮೇಲಕ್ಕೆ ಹಾರಿ, ನೊರೆಯಾಗಿ ಬದಿಗಳಲ್ಲಿ ಹರಿಯುತಿತ್ತು. ಆ ಕಲ್ಲುಗಳ ಕೋಡುಗಳು ಮಾತ್ರ, ಗಾಳಿಯು ಹೊಡೆತಕ್ಕೆ ತಲೆದೂಗುವಂತೆ, ಮೆಲ್ಲ ಮೆಲ್ಲನೆ ಆಗಸದಲ್ಲಿ ಅಲುಗುತಿದ್ದವು.

ಇಂತಹ ಅದ್ಭುತವಾದ ಶಿಲಾರಾಶಿಯನ್ನು ಕಂಡ ಕೂಡಲೆ ವೀರರು ಎದೆಗುಂದಿದರು. ಅರಿತ್ರಗಳು ಅಲುಗದೆ ನಿಂತವು. 'ಕರ್ಣದತ್ತಾ! ಎದೆ ಗುಂದ ಬೇಡ. ಎಲ್ಲಿಯಾದರೂ ಬಿರಿಕಿಬೆಯೊ ನೋಡು. ಅದರೆಡೆಯಿಂದ ನಾವು ಹಾದು ಹೋಗಬೇಕಾಗಿದೆ!'—ಎಂದು ಗೀತಾಧರನು ಕರ್ಣಧಾರನಿಗೆ ಸೂಚಿಸಿದನು. ಕರ್ಣದತ್ತನು ಕತ್ತು ನೀಡಿ ನೋಡಿದರೂ ಬಿರಿಕೆಲ್ಲಿಯೂ

ಕಾಣಿಸದು. ಅಷ್ಟರಲ್ಲಿ ಎಲ್ಲಿಂದಲೊ ಹಕ್ಕಿಯೊಂದು ಹಾರಿಕೊಂಡು ಬಂತು. ಅದು ನೆಟ್ಟಗೆ ಕಲ್ಲುಗಳೆಡೆಗೆ ಹೋಗಿ, ಅವುಗಳ ಮೇಲ್ಗಡೆಯಿಂದ ಹಾದು ಹೋಗಲಾರದೆ, ಎಡೆಯಿಂದಲೆ ನರಿದು ಹೋಗುವುದಕ್ಕಾಗಿ ಹಾದಿ ಹುಡುಕು ವಂತೆ, ಅತ್ತಿತ್ತ ಅಲೆಯುತೊಡಗಿತು. ತುಸು ಹೊತ್ತಿನಲ್ಲಿಯೆ ಅದು ಒಂದು ಕಡೆ ಅಂಬಿನ ವೇಗದಿಂದ ಕಲ್ಲುಗಳೆಡೆ ನುಸುಳಿತು. ಆ ಚಲನೆಯು ಕಲ್ಲುಗಳು ತಲೆತಲೆ ಬಡಿದುಕೊಳ್ಳುವ ಮುಂಚಿತವಾಗಿಯೆ ಹಕ್ಕಿಯು ಆಚೆಗಡೆ ದಾಟ ಹೋಗಿತ್ತು. ಈ ಚಮತ್ಕಾರವನ್ನು ಕಂಡು, ಇದು ತಾರಾದೇವಿಯು ತಮಗೆ ಹಾದಿ ತೋರಿಸಲು ಅನುಗ್ರಹಿಸಿದ ಹಕ್ಕಿಯೆಂದು ಊಹಿಸಿ, ಆ ಹಕ್ಕಿ ಹೋದ ಹಾದಿಯನ್ನೆ ಹಿಡಿದರು. ಎಲ್ಲರೂ ಜೀವವನ್ನು ಕೈಲಿ ಹಿಡಿದುಕೊಂಡು ಹಡಗು ಹಾಯಿಸಿದರು. ದೂರಸರಿದ ಕಲ್ಲುಗಳು ಪುನಃ ಹತ್ತಿರ ಬರ ಬೇಕಾದರೆ, ಹಡಗು ಆ ಇಕ್ಕಟ್ಟಿನ ಹಾದಿಯಲ್ಲಿ ವಾಯುವೇಗದಿಂದ ನುಸುಳಿ ಕೊಂಡು ಹೋಗಿಬಿಟ್ಟಿತು.

ಇಂತಹ ಗಂಡದಿಂದ ಪಾರಗಂಡುದಕ್ಕಾಗಿ ತಾರಾದೇವಿಯನ್ನು ಸ್ಮರಿಸಿ ಕೊಂಡು ಮೆಲ್ಲನೆ ಮುಂದಕ್ಕೆ ಸಾಗಿದರು. ದೂರದಲ್ಲಿ ದಡವು ಕಾಣಿಸಿತು. ಅದನ್ನು ಅನುಸರಿಸಿ ಕೊಂಚ ದೂರ ಹೋಗುತ್ತಲೆ ಬೆನ್ನೀರಿನ ತೊರೆಯೊಂದು ಕಾಣಿಸಿತು. ಆ ವಿಚಿತ್ರವನ್ನು ಕಂಡುಕೊಂಡು ಮುಂದಕ್ಕೆ ಹೋಗಿ, ವೃಕೋದರನೆಂಬ ರಾಜನ ರಾಜ್ಯದಲ್ಲಿ ಇಳಿದುಕೊಂಡರು. ಅಲ್ಲಿ ಕೊಂಚ ವಿಶ್ರಮಿಸಿಕೊಂಡು, ತಾರಿಣಿಯೊಳಗೆ ಅನ್ನಪಾನ ತುಂಬಿಕೊಂಡು, ಅಲ್ಲಿಂದ ಹೊರಟರು. ಅಷ್ಟರಲ್ಲಿ ಯಾವುದೊ ಒಂದು ಕೆಟ್ಟ ಕಾಹಿಲೆಯಿಂದ, ಎಲ್ಲ ವನ್ನೂ ಮುಂದಾಗಿ ಹೇಳಬಲ್ಲ ಕಾಲನೇಮಿಯು ಮಡಿದು ಹೋದನು. ಇದು ತನಕವೂ ಕರ್ಣಧಾರನಾಗಿದ್ದ ಕರ್ಣದತ್ತನು ಕಾಡು ಹಂದಿಯ ಬಾಯಿಗೆ ಎರವಾದನು. ಇವರಿಬ್ಬರನ್ನು ಕಳೆದುಕೊಂಡುದಕ್ಕಾಗಿ ವೀರರು ತುಂಬ ಚಿಂತೆಗೊಂಡು, ಅವರನ್ನಲ್ಲಿಯೆ ಸಮಾಧಿ ಮಾಡಿ ಮುಂದಕ್ಕೆ ಹೋದರು. ಗ್ರಹಗತಿಯನ್ನು ಅರಯ್ವ ಶಕ್ತಿಯುಳ್ಳ ಗ್ರಹಮಿತ್ರನು ಕರ್ಣಧಾರತ್ವವನ್ನು ವಹಿಸಿದನು.

ಹಡಗು ಮೂಡುಗಡೆ ಹೋಯಿತು. ಹಲವು ಹೊಳೆಗಳು ಹಿಂದುಳಿ ದವು; ಹಲವು ಬಗೆಯ ಬರ್ಬರ ಜನರು ಬೆಗಡುಗೊಂಡು ನೋಡುತಿದ್ದರು.

ಧನುರ್ಧಾರಿಣಿಯರಾಗಿದ್ದ ಸ್ತ್ರೀಯರ ರಾಜ್ಯವೂ ದಾಟಿತು. ಯುವನ ವೀರರು ಅಲ್ಲಿಳಿದು ಅವರೊಡನೆ ಕಾದಲು ಮನಸ್ಸು ಮಾಡಲಿಲ್ಲ. ಮುಂದೆ ಹೋಗಿ ಹೋಗಿ ಕಮ್ಮರಗಿರಿಯ ಬಳಿಗೆ ಬಂದರು. ಅಲ್ಲಿ ಹಗಲಿರುಳೆನ್ನದೆ ಕಮ್ಮರರು, ರಣದೇವನ ಸಲುವಾಗಿ, ಬಗೆಬಗೆಯ ಆಯುಧಗಳನ್ನು ನಿರ್ಮಿಸುತ್ತಲಿದ್ದರು. ಚಮ್ಮಟಿಕೆಯ ಕಣಕಣವೂ ಅಗ್ಗಿಷ್ಟಿಕೆಯ ಘೋರ್ದನಿಯೂ ನಿರಂತರವೂ ಕಿವುಡುಕಟ್ಟುತ್ತಲಿತ್ತು. ಇರುಳಲ್ಲಿ ಆ ಬೆಂಕಿಯ ನಾಲಗೆಗಳು ಮಿಂಚಿನಂತೆ ಗಿರಿಗಳೆಡೆಯಲ್ಲಿ ಮಿನುಗುತ್ತಲಿದ್ದವು. ಲೋಕ ನಾಶನಕ್ಕೆ ರಣದೇವನು ಮಾಡುತಿದ್ದ ಸಾಹಸದ ಪರಿಮಾಣವು ಇದರಿಂದ ವ್ಯಕ್ತವಾಗುತಲಿತ್ತು.

ಬೆಳಗು ತನಕವೂ ಈ ಗೊಂದಲದಲ್ಲಿಯೆ ತಾರಿಣಿಯು ಸರಿದುಕೊಂಡು ಹೋಯಿತು. ಅರುಣೋದಯವಾಗುತ್ತಲೆ ಮೂಡುಗಡೆಯಲ್ಲಿ ಹಿಮ ಮುಸುಕಿದ್ದ ಉನ್ನತವಾದ ಗಿರಿಶಿಖರಗಳು ಕಾಣಿಸಿದವು. ಭೂಮಿಯ ಕೊನೆಯಲ್ಲಿದ್ದುಕೊಂಡು, ಎಲ್ಲ ನದಿಗಳಿಗೂ ತವುರಾಗಿ, ಅತ್ಯುನ್ನತವಾಗಿ ಬೆಳೆದಿರುವ ಧರಿತ್ರೀಧರವೆಂಬ ಪರ್ವತಶ್ರೇಣಿಯೊಂದರೆ ಇದೇ ಎಂಬುದು ಎಲ್ಲರಿಗೂ ತಿಳಿಯಿತು. ಈ ಪರ್ವತದ ಸಾನುವಿನಲ್ಲಿಯೆ, ಕಾಡುಗಳ ನಡುವೆ, ಮಾಯಾ ಭೂಮಿಯಾದ ಪ್ರಭಾಮಂಡಲವಿರುವುದೆಂದು ಅವರಿಗೆ ಗೊತ್ತು.

ಮೂರು ದಿನಗಳ ತನಕ ಮುಂದೆ ಸಾಗಿದರು. ಗಳಿಗೆಗಳಿಗೆಗೂ ಧಾತ್ರೀಧರವು ಹತ್ತಿರವೂ ಎತ್ತರವೂ ಆದಂತೆ ಕಾಣಿಸುತಿತ್ತು. ವಿಶಾಲವಾದೊಂದು ನದಿಯ ಸಾಗರಸಂಗಮವಾಗಿತ್ತು. ಕೊನೆಗೆ ಸೂರ್ಯಪುತ್ರನಾದ ಮಿತ್ರಾವಸುವಿನ ಅರಮನೆಯ ಗೋಪುರಗಳು ಹೊಂಬಿಸಿಲಲ್ಲಿ ಹೊನ್ನಿನಂತೆ ಮಿರುಗ ಹತ್ತಿದವು.

ಇದನ್ನು ಕಾಣುತ್ತಲೆ ಗ್ರಹಮಿತ್ರನು—'ಬಂಧುಗಳಿರಾ! ಹೇಗಾದರೂ ಪ್ರಭಾಮಂಡಲಕ್ಕೆ ಬಂದಂತಾಯಿತು. ಅದೊ! ಅಲ್ಲಿದೆ ಮಿತ್ರಾವಸುವಿನ ಅರಮನೆ! ಸುತ್ತುಮುತ್ತು ವಿಷ ಬೆಳೆಯುವ ಕಾಡುಗಳು ಕಾಣಿಸುತ್ತಿವೆ. ಹೊಂದೊವಲು ಆ ಕಾಡುಗಳೆಡೆ ಎಲ್ಲಿದೆಯೆಂದು ಯಾರು ಬಲ್ಲ? ಅದನ್ನು ಹುಡುಕಿಕೊಂಡು ಬಂದು ನಾವು ಯುವನ ದೇಶವನ್ನು ಸೇರ ಬೇಕಾದರೆ ಹಲವು ಗಂಡಗಳಿಂದ ಪಾರಗಾಣ ಬೇಕಾದೀತು!'—ಎಂದು ಮರುಕದ ಮಾತುಗಳನ್ನು ನುಡಿದನು.

ಆದರೆ ಈ ಯಾತ್ರೆಗೆ ಮೂಲ ಕಾರಣನಾದ ಸುಧಾಕರನು ಎಲ್ಲರಿಗಿಂತಲೂ ಶೂರನು. ಆತನು ತನ್ನ ಅನುಯಾಯಿಗಳು ಉಲ್ಲಾಸಗೊಳ್ಳುವಂತೆ —'ಏಕೆ? ಮಿತ್ರಾವಸುವು ಪ್ರತ್ಯಕ್ಷ ಸೂರ್ಯನ ಪುತ್ರನೆ ಆಗಿರಲಿ! ಅಥವಾ ಇನ್ನು ಯಾವನೆ ಆಗಲಿ! ನಾನು ಏಕಾಂಗಿಯಾಗಿ ಹೋಗಿ ಆತನನ್ನು ಒಲಿಸಿಕೊಳ್ಳ ಬಲ್ಲೆ! ಸವಿ ಮಾತಿಗೆ ಮರುಳಾಗದವನು ಯಾವನೂ ಇರನು. ಎಲ್ಲರೂ ಒಂದಾಗಿ ಹೋಗಿ, ಗೊಂದಲವೆಬ್ಬಿಸಿ, ಕೂಡಲೆ ಕೈಕೈಗೆ ಬರುವುದಕ್ಕಿಂತಲೂ ನಾನು ಹೇಳಿದುದೆ ಉತ್ತಮವೆಂದು ಕಾಣುತ್ತಿದೆ. ಸಾಮವೆ ಮೇಲು!'—ಎಂದು ನೀತಿ ಹೇಳಿದನು. ಆದರೆ ಎಲ್ಲರೂ ಯುವನ ವೀರರು! ಆದುದರಿಂದ ಯಾವನೂ ಹಿಂದುಳಿಯಲೊಲ್ಲನು. ಎದೆ ಕಲ್ಲುಮಾಡಿಕೊಂಡು ನದಿಯಲ್ಲಿ ತಾರಿಣಿಯನ್ನು ಮೆಲ್ಲನೆ ನಡೆಸಿದರು.

ಅಂದಿನ ಇರುಳು ಮಿತ್ರಾವಸುವಿಗೊಂದು ಕನಸು ಕಂಡಿತು. ಅದರಿಂದ ಅವನ ಅಂತರಂಗವೆಲ್ಲವೂ ಭಯದಿಂದ ತುಂಬಿ ಹೋಯಿತು. ತಾನೊಂದು ತಳತಳಿಸುವ ಚುಕ್ಕಿಯನ್ನು ಕಂಡಂತೆಯೂ, ಅದು ತನ್ನ ಮಗಳ ಮಡಿಲೊಳಗೆ ಬಿದ್ದಂತೆಯೂ, ಆ ಮಗಳಾದ ಮಾಧವಿಯು ಸಂತಸದಿಂದ ಅದನ್ನೆತ್ತಿಕೊಂಡು, ನದಿಯ ಬಳಿಗೆ ಹೋಗಿ ಅದನ್ನು ನದಿಯೊಳಕ್ಕೆಸೆದಂತೆಯೂ, ಪ್ರವಾಹಕ್ಕೆ ನದಿಯು ಅದನ್ನು ಕಾಲಸಾಗರಕ್ಕೆ ಕೊಚ್ಚಿಕೊಂಡು ಹೋದಂತೆಯೂ, ಕನಸಿನಲ್ಲಿ ಪ್ರತಿಬಿಂಬಿತವಾಯಿತು.

ರಾಜನು ತಟ್ಟನೆ ಹಾಸುಗೆಯಿಂದ ಹಾರಿ ಸೇವಕರನ್ನು ಕರೆದು ತೇರನ್ನು ತರುವಂತೆ ಹೇಳಿದನು. ನದಿಯ ಬಳಿ ಕಾದುತ್ತಿರುವ ವೀರರ ಪ್ರೇತಗಳನ್ನು ಶಾಂತಗೊಳಿಸುವುದಕ್ಕಾಗಿಯೂ, ಅಪ್ಸರೆಯರನ್ನು ಪ್ರೀತಿಗೊಳಿಸುವುದಕ್ಕಾಗಿಯೂ, ತಾನು ಕೂಡಲೆ ನದಿಯ ಕಡೆ ಹೋಗಬೇಕೆಂದೆಣಿಸಿದನು. ರಥವು ಅಣಿಯಾದೊಡನೆಯೆ ಮಿತ್ರಾವಸುವು ಮಾಯಾವಿನಿಯಾದ ಮಾಧವಿಯನ್ನೂ ಜೀಮೂತನ ಪತ್ನಿಯಾಗಿದ್ದ ಪ್ರಭಾವತಿಯನ್ನೂ ಕುಳ್ಳಿರಿಸಿಕೊಂಡು, ಪರಿವಾರವನ್ನೂ ದಳವನ್ನೂ ಕೂಡಿಕೊಂಡು, ನದಿಯ ತಡಿಗೆ ಹೊರಟನು. ತೀರದ ಮರಗಳ ಮರೆಯಲ್ಲಿ ತಾರಿಣಿಯು ಮೆಲ್ಲನೆ ಸರಿದು ಬರುತಲಿತ್ತು. ಅದರೊಳಗಿನ ವೀರರನ್ನು ಕಂಡು ಮಿತ್ರಾವಸುವಿಗೆ ದೇವತೆಗಳನ್ನು ಕಂಡಂತಾಯಿತು. ಅವರ ಚೆಲುವೇನು! ಬಲವೇನು! ಕೈದುಗಳ ಹೊಳಪೇನು! ತಾರಾ

ದೇವಿಯು ತನ್ನ ಪ್ರೇಮದ ವೀರನಾದ ಸುಧಾಕರನಿಗೆ ಚೆಲುವನ್ನೂ ಬಲ ವನ್ನೂ ಪೌರುಷವನ್ನೂ ವಿಶೇಷವಾಗಿ ಕರುಣಿಸಿದ್ದಳು. ಆದುದರಿಂದ ಆತನು ಗೂಳಿಯಂತೆ ಕಾಣಿಸುತಿದ್ದನು.

ಹತ್ತಿರ ಹತ್ತಿರಕ್ಕೆ ಬರುತ್ತಲೆ ಒಬ್ಬರನ್ನೊಬ್ಬರು ನೋಡುವಂತಾಯಿತು. ಪ್ರಭಾಮಂಡಲದವರನ್ನು ಕಂಡು ಯುವನವೀರರು ಬೆರಗಾದರು. ಮಿತ್ರಾ ವಸುವು ತನ್ನ ಕುಲಪತಿಯಾದ ಸಹಸ್ರಕಿರಣನಂತೆ ಹೊಂದೇರಲ್ಲಿ ಹೊಳೆಯು ತಿದ್ದನು. ಉಡುಪು ತೊಡುಪುಗಳು ಹೊನ್ನಿನಂತೆ ಹೊಳೆಯುತಿದ್ದವು. ರಾಜದಂಡವು ಕಿಡಿಕಾರುವಂತಿತ್ತು. ಅದರಲ್ಲಿನ ರತ್ನಗಳು ಚುಕ್ಕಿಗಳಂತೆ ಮಿನುಗುತ್ತಲಿದ್ದವು. ಕಣ್ಣು ಕೆಂಪಗೆಮಾಡಿ, ಅವರನ್ನು ನೋಡಿ, ಮಿತ್ರಾ ವಸುವು—'ಯಾರಯ್ಯಾ ನೀವು? ನಿಮಗಿಲ್ಲೇನಿದೆ? ಇದು ಪ್ರಭಾಮಂಡಲ ವೆಂಬುದು ತಿಳಿಯದೆ? ನನ್ನ ಆಳಿಕೆಯನ್ನು ಲೆಕ್ಕಿಸುವುದಿಲ್ಲವೆ? ನನ್ನ ಅಂಕೆಯ ವೀರರನ್ನು ಕಂಡು ಕೇಳಿ ತಿಳಿದಿಲ್ಲವೆಂದು ಕಾಣುತ್ತಿದೆ! ಅತಿಕ್ರಮಣ ಮಾಡು ವವರ ಗತಿಯೇನಾದೀತೆಂದು ಕೊಂಚ ಯೋಚಿಸಿ ನೋಡಿರಿ!'—ಎಂದು ಗದರಿಸಿದನು.

ಯುವನರೆಲ್ಲರೂ ಈ ಆಡಂಬರವನ್ನು ಕಂಡು, ದಂಗು ಬಡಿದು, ಆ ರಾಜನ ಮೊಗವನ್ನೆ ನೋಡುತಿದ್ದರು. ತಾರಾದೇವಿಯು ಸುಧಾಕರನ ಹೃದಯದಲ್ಲಿ ಶೂರತ್ವವನ್ನು ಸುರಿದಳು. ಆತನು ಮುಂದೆ ಬಂದು— 'ಮಿತ್ರಾವಸು ರಾಜನೆ! ನಾವು ಕಡಲ ಕಳ್ಳರೂ ಅಲ್ಲ; ಹದ ಮೀರಿದವರೂ ಅಲ್ಲ! ನಿನ್ನ ರಾಜ್ಯವನ್ನು ಸುಲಿಗೆ ಮಾಡುವುದಕ್ಕಾಗಲಿ ಕಾಳುಗೆಡಿಸುವುದಕ್ಕಾ ಗಲಿ ನಾವು ಬಂದವರಲ್ಲ. ವರುಣಪುತ್ರನಾದ ಸೈಂಧವನು ಇಳಾವರ್ತದ ರಾಜನು. ಆತನು ನನಗೆ ಕಕ್ಕಯ್ಯನಾಗಬೇಕು. ಹೊಂದೊವಲನ್ನು ತರು ವುದಕ್ಕಾಗಿ ನಮ್ಮನ್ನು ಇಲ್ಲಿಗೆ ಕಳುಹಿರುವನು. ನನ್ನ ಸಂಗಾತಿಗಳೇನಾದರೂ ಹೆಸರಿಲ್ಲದವರಲ್ಲ. ಕೆಲವರು ಅಮರರ ಮಕ್ಕಳು. ಕೆಲವರು ದಿಗಂತ ಕೀರ್ತಿವಂತ ವೀರರ ಮಕ್ಕಳು. ನಾವು ಕೂಡ ಕಾಳೆಗದಲ್ಲಿ ದಣಿಯುವವರಲ್ಲ ಕೊಡುವುದಕ್ಕೂ ಕೊಳ್ಳುವುದಕ್ಕೂ ಚೆನ್ನಾಗಿ ಬಲ್ಲೆವು! ಆದರೂ ನಿಮ್ಮಲ್ಲಿ ಅತಿಥಿಗಳಾಗಿ ಉಣಲು ಬಯಸುವೆವು. ಕಲಹಕ್ಕಿಂತಲೂ ಮೈತ್ರಿಯೆ ಮೇಲು!'—ಎಂದು ನುಡಿದನು.

ಆಗ ಮಿತ್ರಾವಸುವಿನ ರೋಷವು ಮಿತಿಮೀರಿ ಕಿಡಿಗಳಂತೆ ಕಣ್ಣುಗಳಿಂದ ಕೆದರಿತು. ಆದರೂ ಅದನ್ನು ತಡೆಗಟ್ಟಿ ತಾಳ್ಮೆಯಿಂದ ಹೋಸದ ಹಾಸನ್ನು ಒಡ್ಡಿದನು. 'ವೀರಪುತ್ರರಿರಾ! ನಿಮ್ಮನ್ನು ಕಂಡು ನನಗೆ ಅತ್ಯಾನಂದ ವಾಯಿತು. ಹೊಂದೊವಲಿಗಾಗಿ ಕಾದುವಿರಾದರೆ ಹಲವರು ಮಡಿಯಲೆ ಬೇಕು. ಆದುದರಿಂದ ಅದನ್ನು ಹೊಂದಿಯೇವೆಂಬ ಹಂಬಲನ್ನು ಬಿಟ್ಟು ಬಿಡಿ. ಯಾಕೆಂದರೆ ನೀವಿರುವದು ಕೇವಲ ಅಲ್ಪ ಮಂದಿ. ನಿಮ್ಮ ಹೆಣಗಳನ್ನು ನಿಮ್ಮ ಹಡಗಿನಲ್ಲಿಯೆ ತುಂಬಿ ತಳ್ಳಿ ಬಿಡುವುದು ನನಗೇನೊ ಮಹತ್ವದ ಕೆಲಸವಾಗಿ ಕಾಣಿಸುವುದಿಲ್ಲ. ಆದರೆ ನನ್ನ ಮಾತಿಗೆ ಕಿವಿಗೊಡುವಿರಾದರೆ ಹೇಳುತ್ತೇನೆ ಕೇಳಿರಿ. ನಿಮ್ಮಲ್ಲಿ ಅತ್ಯಂತ ಸಮರ್ಥನಾದವನೊಬ್ಬನು ಮುಂದೆ ಬರಲಿ. ನಾನು ಹೇಳುವ ಕೆಲಸಗಳನ್ನು ಮಾಡಿ ತೀರಿಸಲಿ. ಹಾಗೆ ಮಾಡಿದಿರೆಂದರೆ ಅಂತಹನಿಗೆ ಹೊಂದೊವಲು ಉಚಿತವಾಗಿ ದೊರೆಯುವುದು. ನಿಮಗೆ ಕೀರ್ತಿಯೂ ಬರುವುದು!'—ಎಂದು ದರ್ಪದ ಮಾತುಗಳನ್ನು ನುಡಿದನು.

ಆ ಮೇಲೆ ಮಿತ್ರಾವಸುವು ಒಂದು ಮಾತನ್ನೂ ಆಡದೆ, ತೇರನ್ನು ತಿರುಗಿಸಿ ನಗರಕ್ಕೆ ಮರಳಿದನು. ವೀರರ ತಂಡವು ಕೊರಗಲು ತೊಡಗಿತು. 'ಸಾವಿರಗಟ್ಟಲೆ ಯೋಧರನ್ನು ಇದಿರಿಸಿ ಕಾದಿ ಗೆಲುವುದು ತೀರ ನಲ್ಲದ ಮಾತು. ಇಂತಹ ಸಂಧಿಯಲ್ಲಿ ವಜ್ರಾಂಗನೂ ಆತನ ಅಮಾನುಷ ಶಕ್ತಿಯೂ ನಮಗೆ ನೆರವಾಗದೆ ಹೋಯಿತು. ಈಗೇನು ಮಾಡಲಿ?'—ಎಂಬುದೇ ಅವರ ಚಿಂತೆಯಾಗಿತ್ತು.

## VIII

ಆದರೆ ಜೀಮೂತಪತ್ನಿಯಾದ ಪ್ರಭಾವತಿಯು, ತನ್ನ ಪತಿಯು ಬಂಧು ಗಳಾದ ಈ ವೀರರ ಚೆಲುವೊಗವನ್ನೂ ಹೊಮ್ಮುಡಿಯನ್ನೂ ಕಂಡು, ತನ್ನ ಮನದೆರೆಯನನ್ನೂ, ಆತನೊಡನೆ ಎಳವೆಯಲ್ಲಿ ತಾನುಂಡ ನೊಗವನ್ನೂ ಎಣಿಸಿಕೊಂಡು, ಅಳುವುದಕ್ಕೆ ತೊಡಗಿದಳು. ಅರಮನೆಗೆ ಹೋಗುತ್ತಲೆ ಮಾಧವಿಯನ್ನು ಹತ್ತಿರಕ್ಕೆ ಕರೆದು—'ತಂಗೀ! ಇಷ್ಟೆಲ್ಲ ವೀರರು ಏತಕ್ಕಾಗಿ ಸಾವಿಗೆ ಎರವಾಗ ಬೇಕು? ನಮ್ಮಪ್ಪನಾದರೊ ಏತಕ್ಕಾಗಿ ಇಂತಹ ಚಲ

ಹಿಡಿದಿರುವನೊ ಕಾಣೆ! ಹೊಂದೊವಲನ್ನು ಒಪ್ಪಿಸಿ ಕೊಟ್ಟು, ತನ್ನ ಅಳಿಯನ ಆತ್ಮಕ್ಕೆ ಶಾಂತಿಯಾದರೂ ದೊರಕುವಂತೆ ಮಾಡ ಬಾರದೆ?'—ಎಂದು ನಿಟ್ಟುಸಿರಿಟ್ಟಳು.

ಆಗಲಾ ಮಾಯಾವಿನಿಗೆ ಕೂಡ ಮನ ಕರಗಿತು. ಅದರಲ್ಲಿಯೂ ಸುಧಾಕರನ ಮೇಲಂತೂ ಅತಿಶಯವಾದ ಕನಿಕರ ಹುಟ್ಟಿತು. 'ಅಕ್ಕಯ್ಯಾ! ನಮ್ಮಪ್ಪನನ್ನು ಕಂಡರಿಯೆಯಾ? ಬಲು ಕ್ರೂರಿ! ಮಾತೊಂದು, ತುಂಡೆರಡು! ಹೊಂದೊವಲನ್ನು ಅಪಹರಿಸುವಂತಹ ಸಾಹಸಿಗನು ಯಾವನೊ ನಾನು ಕಾಣೆ!'—ಎಂದು ಮರುಮಾತಾಡಿದಳು.

ಪ್ರಭಾವತಿಯು—'ಹಾಗೆನ್ನ ಬೇಡ. ಯವನ ವೀರರೆಂದರೆ ನಮ್ಮ ಜನರಂತಲ್ಲ. ಯಾವುದಕ್ಕೂ ಹಿಂಜರಿಯರು!'—ಎಂದು ಹೊಗಳಿದಳು.

ಮಾಧವಿಯ ಮನದ ಮಂದಿರದಲ್ಲಿ ಸುಧಾಕರನ ಮೂರ್ತಿಯು ಮಂಡಿಸಿತ್ತು. ಆ ಮೂರ್ತಿಯನ್ನು ನೆನೆದುಕೊಂಡು,—'ಅಂಜಿಕೆ ಅರಿಯದವನು ಅವರಲ್ಲೊಬ್ಬನು ಇರುತಿದ್ದರೆ, ಅಂತಹನಿಗೆ ಹೊಂದೊವಲನ್ನು ಹೊಂದುವ ಹಂಚಿಕೆಯನ್ನು ಹೇಳಿಕೊಡ ಬಹುದಿತ್ತು!'—ಎಂದು ಅರೆನುಡಿ ನುಡಿದಳು.

ಈ ರೀತಿ ಮಾತನಾಡುತಿದ್ದು ಕೊನೆಗೆ ಸಂಜೆ ಕವಿಯುತ್ತಲೆ ಆ ಅಕ್ಕ ತಂಗಿಯರಿಬ್ಬರೂ ಹೊಳೆಯ ಹಾದಿ ಹಿಡಿದರು. ಜತೆಯಲ್ಲಿ ಜೀಮೂತ ಪುತ್ರನಾದ ಲೋಹಾಂಗನೂ ಬಂದಿದ್ದನು. ತಾರಿಣಿಯಿರುವಲ್ಲಿಗೆ ಬಂದೊಡನೆಯೆ ಲೋಹಾಂಗನು, ನೀರುಗಿಡಗಳ ಎಡೆಯಿಂದ ಹರಿದುಕೊಂಡು ಹಡಗಿನ ಹತ್ತಿರ ಹೋದನು. ಎಲ್ಲರೂ ನಿದ್ದೆ ಮಾಡಿದ್ದರು. ಸುಧಾಕರನೊಬ್ಬನು ಮಾತ್ರ ತೀರದಲ್ಲಿ ಕಾವಲು ಕುಳಿತಿದ್ದನು. ಕುಂತದ ಹಿಡಿಗೆ ಆತುಕೊಂಡು ಚಿಂತಿಸುತಿದ್ದನು.

ಹುಡುಗನು ಹತ್ತಿರಕ್ಕೆ ಹರಿದು—'ಯವನ ವೀರಾ! ನಾನು ನಿಮ್ಮಣ್ಣನಾದ ಜೀಮೂತನ ಮಗನು. ನಮ್ಮಮ್ಮ ಪ್ರಭಾವತಿಯು—ಅದೊ! ಅಲ್ಲಿ ನಿಂತಿರುವಳು. ನಿನ್ನೊಡನೆ ಹೊಂದೊವಲಿನ ಸುದ್ದಿ ಹೇಳಲು ಬಂದಿರುವಳು' ಎಂದು ಹೇಳಿದನು.

ಸುಧಾಕರನು ಹುಡುಗನ ಜತೆಯಲ್ಲಿ ನಡೆದನು. ಕೊಂಚ ದೂರದಲ್ಲಿ ಇಬ್ಬರು ರಾಜಕುಮಾರಿಯರು ನಿಂತಿದ್ದರು. ಪ್ರಭಾವತಿಗೆ ಸುಧಾಕರನನ್ನು

ಕಂಡೊಡನೆಯೆ ಅಳು ಬಂತು. ಅಳುತ್ತ—'ಭಾವಯ್ಯಾ! ಇದೊ, ಕೈ ಜೋಡಿಸಿ ಹೇಳುತ್ತೇನೆ. ಸಾವಿಗೆ ಎರವಾಗದೆ ಜೀವವನ್ನುಳಿಸಿಕೊ! ಮನೆಗೆ ಹೋಗಿ ನೆಮ್ಮದಿಯಾಗಿ ಬಾಳು!'—ಎಂದು ಕೇಳಿಕೊಂಡಳು.

ಅದಕ್ಕೆ ಸುಧಾಕರನು—'ವೀರಪತ್ನಿ! ಹಿಂದಕ್ಕೆ ಮರಳುವುದು ಎಂದಿಗೂ ಸಲ್ಲದು. ನೂರಾರು ಕಡಲುಗಳನ್ನು ಹಾದು ಬಂದೆವು. ನಮ್ಮ ಪ್ರಯತ್ನವು ಫಲಿಸಲೆ ಬೇಕು!'—ಎಂದು ದೃಢವಾಗಿ ನುಡಿದನು.

ಈ ಮಾತನ್ನು ಕೇಳಿ ಆ ಇಬ್ಬರು ರಾಜಕುಮಾರಿಯರೂ ಈತನನ್ನು ಬಲು ತೆರನಾಗಿ ಬೇಡಿಕೊಂಡರು. ಏನು ಹೇಳಿದರೂ ಸುಧಾಕರನು ಕೆಲಸವು ಮುಂಚಿಹೋಯಿತೆಂದು ಬಿಟ್ಟನು.

ಕೊನೆಗೆ ಮಾಧವಿಯು—'ಚೆನ್ನಿಗಾ! ಹೊಂದೊವಲನ್ನು ಬಯಸು ವವನು ಏನು ಮಾಡುವುದಕ್ಕಿದೆಯೆಂದು ನಿನಗೆ ತಿಳಿಯದು. ನಮ್ಮಪ್ಪನ ಬಳಿ ಒಂದು ಜತೆ ಎತ್ತುಗಳಿವೆ. ಅವುಗಳ ಗೊರಸುಗಳು ಹಿತ್ತಾಳಿಯವು; ಉಸಿರು ಬೆಂಕಿಯ ಜ್ವಾಲೆ! ಇಂತಹ ವಿಚಿತ್ರಪ್ರಾಣಿಗಳನ್ನು ಕಟ್ಟಿಕೊಂಡು ರಣದೇವನ ಕಳದಲ್ಲಿ, ಕತ್ತಲು ಕವಿಯುವುದರೊಳಗೆ ನಾಲ್ಕು ಅಂಕಣ ಉಳ ಬೇಕು! ಆ ಮೇಲೆ ಹಾವಿನ ಹಲ್ಲುಗಳನ್ನು ಬಿತ್ತ ಬೇಕು! ಒಂದೊಂದು ಬೀಜದಿಂದ ಒಬ್ಬೊಬ್ಬ ಕಲಿಯು ಹುಟ್ಟಿಕೊಳ್ಳುವನು! ಆ ಕಲಿಗಳೆಲ್ಲರೊಡನೆ ಕಾದಿ ಗೆಲ ಬೇಕು! ಹಾಗೆ ಗೆದ್ದರೂ ಫಲವಿಲ್ಲ. ಹೊಂದೊವಲು ಸಿಗಲಾರದು! ಆ ಹೊಂದೊವಲಿಗೆ ಭೀಕರವಾದೊಂದು ಹೆಬ್ಬಾವು ಕಾವಲಿದೆ. ಅದನ್ನು ತುಳಿದ ವಿನಾ ತೊವಲು ನಿಲುಕದು!'—

ಇಂತಹ ಅದ್ಭುತವಾದ ವರ್ಣನೆಯನ್ನು ಕೇಳಿ ಸುಧಾಕರನಿಗೆ ಬಲು ವ್ಯಥೆಯಾಯಿತು. 'ಆ ತೊವಲನ್ನು ಇಲ್ಲಿಟ್ಟಿರುವುದು ಕೇವಲ ಅನ್ಯಾಯ! ಹಾಗೆ ಮಾಡಿರುವ ರಾಜನ ಹದಮೀರಿದ ವರ್ತನೆಯು ಕೂಡ ಕೇವಲ ಅನ್ಯಾಯ! ಎಳವೆಯಲ್ಲೆ ನಾವಿಲ್ಲಿ ಪ್ರಾಣಗಳನ್ನು ನೀಗ ಬೇಕಾಗುವುದು ಕೂಡ ಕೇವಲ ಅನ್ಯಾಯ! ಆದರೂ ಏನು ಮಾಡಲಿ! ನಾಳಿನ ಸೂರ್ಯನು ಕಂತುವುದರೊಳಗೆ ನಾನು ಸಾಧಿಸದೆ ಬಿಡೆನು!'—ಎಂದು ಗರ್ಜಿಸಿದನು.

ಈತನ ಮಾತನ್ನು ಕೇಳಿ ಮಾಧವಿಯು ಮನನೊಂದು ನಡುಗಿ— 'ನಾನು ಹಾದಿ ಹೇಳದೆ ಹೋದರೆ, ಮಾನವ ಮಾತ್ರನಿಂದ ಆ ತೊವಲಿನ

ಹತ್ತಿರ ಹೋಗಲು ಸಾಧ್ಯವಿಲ್ಲ. ಆ ತೊವಲಿರುವ ತೋಪಿನ ಸುತ್ತಲೂ ಒಂಬತ್ತು ಕೋಲು ಎತ್ತರದ ಪಾಗಾರವಿದೆ. ಅದರೊಳಕ್ಕೆ ಹೋಗಲು, ಹಿತ್ತಾಳೆಯ ಮೂರಂತರದ ಹೆಬ್ಬಾಗಿಲುಗಳಿಂದಲ್ಲದೆ, ಬೇರೆ ಹಾದಿಯಿಲ್ಲ. ಆ ಹೆಬ್ಬಾಗಿಲುಗಳ ಮೇಲ್ಗಡೆ ಗೋಪುರದೊಳಗೆ ತ್ರಿಶಿರಾ ಎಂಬ ಮೂದಲೆಯ ಮಾಯಾವಿನಿಯು ಕಾವಲು ಕುಳಿತಿರುವಳು! ಆಕೆಯ ಕೈಯೊಳಗೆ ದೊಡ್ಡ ದೊಂದು ದೀವಟಿಗೆಯು ಉರಿಯುತ್ತಿರುವುದು. ಮರುಳು ನಾಯಿಗಳು ಸುತ್ತಲೂ ಕುಣಿದಾಡುತ್ತಲಿರುವವು. ಇಂತಹ ಭೀಕರ ರೂಪಿಣಿಯನ್ನು ಕಣ್ಣೆತ್ತಿ ನೋಡಲು ಯಾರಿಂದಲೂ ಸಾಗದು. ಆದರೆ ನಾನು ಮಾತ್ರ ಆಕೆಯ ಅನುವರ್ತಿನಿಯಾದುದರಿಂದ ಆಕೆಯ ಇದಿರಲ್ಲಿ ಅಂಜಿಕೆಯಿಲ್ಲದೆ ಅಲೆಯ ಬಲ್ಲೆನು!'—

ಇಷ್ಟರಲ್ಲಿ ಮಾಧವಿಯ ಮನದೊಲವನ್ನು ಅರಿತುಕೊಂಡ ಸುಧಾಕರನು—'ಅಮ್ಮಾ! ಹೇಗೂ ಇರಲಿ. ಪಾಗಾರವು ಎತ್ತರವೆಷ್ಟಿದ್ದರೂ ಸಾಹಸಿಗೆ ಸಾಧ್ಯವಾಗದಿರದು! ತೋಪು ತೀರ ಮಂದವಾಗಿದ್ದರೂ ಹರಿದುಕೊಂಡು ಹೋಗುವಷ್ಟು ಎಡೆ ಸಿಕ್ಕೀತು! ಎಂತಹ ಹಾವಾದರೂ ತಂತ್ರಕ್ಕೆ ಸಿಲುಕದೆ ಹೋಗದು! ಎಷ್ಟು ಭೀಕರೆಯಾದರೂ ಆ ಮಾಯಾವಿನಿಯು ಮಂತ್ರಕ್ಕೆ ಮರುಳಾಗದಿರಳು! ಆದುದರಿಂದ ನಮ್ಮಂತಹ ಧೀರರಿಗೆ ನಿನ್ನಂತಹ ತೀಕ್ಷ್ಣ ಬುದ್ಧಿಯ ಕನ್ನಿಕೆಯ ನೆರವು ದೊರೆತರೆ, ಹೊಂದೊವಲು ಎಂದೂ ಸಿಗದೆ ಹೋಗದು!'—ಎಂದು ಆಕೆಯನ್ನು ಕೊಂಚ ಹೊಗಳಿ, ತನ್ನ ನಡುನೋಟಕ್ಕೆ ಆಕೆಯು ಅಳುಕುವಂತೆ ಮಾಡಿದನು.

ಆಗಲಾಕೆಯು—'ಸರಿ ಸರಿ. ಆದರೆ ಎತ್ತಿನ ಉಸಿರಿಗೆ ಇದಿರು ನಿಲ್ಲುವವರು ಯಾರು? ಅಯುತ ಯೋಧರೊಡನೆ ಹೋರಾಡುವವರು ಯಾರು?'—ಎಂದು ಹೆದರಿಸಿದಳು.

ಸುಧಾಕರನು—'ಯಾರೆಂದರೆ? ಯಾರನ್ನು ನೀನು ಅನುಗ್ರಹಿಸುವಯೊ ಅಂತಹನು ಆ ಕಾರ್ಯಗಳನ್ನು ಮಾಡಿಯೆ ಮಾಡುವನು! ಅಮ್ಮಾ! ಮುಚ್ಚು ಮರೆಯೇಕೆ? ನಿನ್ನ ಹೆಸರು ದಿಗಂತ ಹರಡಿಕೊಂಡಿದೆ. ನೀನು ಮಾಯಾವಿನಿಯರೊಳಗೆ ಮಾಯಾವಿನಿಯೆಂಬುದು ನಾನು ಬಲ್ಲೆ! ಪಡುಗಡಲ ನಡುವೆ ನೆಲಸಿರುವ ನಿನ್ನ ಸಹೋದರಿ ಸಾವಿತ್ರಿಗಿಂತಲೂ

ನೀನೆ ಮಿಗಿಲೆಂಬುದು ಕೂಡ ನನಗೆ ಗೊತ್ತು!'—ಎಂದು ಇನ್ನೂ ಹೊಗಳುವುದರಲ್ಲಿದ್ದನು.

ಮಾಧವಿಯು—'ಹಾ! ಹಾ! ಸಹೋದರಿ ಸಾವಿತ್ರಿಯೊಂದಿಗೆ ನಾನು ಕೂಡಾ ಆ ನಡುಗುಡ್ಡೆಯಲ್ಲಿಯೆ ನೆಲಸಿರಬಾರದಿತ್ತೆ? ಈ ಆಶಾಪಾಶಗಳೂ ಚಿಂತಾತರಂಗಗಳೂ ನನ್ನ ಹೃದಯವನ್ನು ಹೀಳುತ್ತಿರಲಿಲ್ಲ! ಆಗಲಿ ದೈವ ಚಿಂತನೆಯಂತೆಯೆ ವರ್ತಿಸ ಬೇಕು. ಇರಲಿ! ಈಗ ನೀನೇಕೆ ಸಾಯಲಿ! ಇದೋ, ನನ್ನ ಬಳಿಯೊಂದು ಕಲ್ಕವಿರುವುದು. ಧಾತ್ರೀಧರ ಶಿಖರಗಳಲ್ಲಿ ಬೆಳೆಯುವ ಹಿಮಕುಸುಮವೆ ಇದರ ಪ್ರಧಾನ ದ್ರವ್ಯವು. ಇದನ್ನು ಹಚ್ಚಿಕೊಂಡೆಯೆಂದರೆ ಏಳು ಜನರ ಬಲವು ಬರುವುದು. ಗುರಾಣಿಗೆ ಸವರಿದೆಯೆಂದರೆ ಬೆಂಕಿಯೂ ಲೋಹವೂ ಅದಕ್ಕೆ ಮತ್ತೆ ಈಡಲ್ಲ. ಆದರೆ ಈ ಕಲ್ಕದ ಪ್ರಭಾವವು ಒಂದು ದಿನಕ್ಕೆ ಮಾತ್ರ ಫಲಿಸುವುದು. ಆದುದರಿಂದ ಹೊತ್ತು ಕಂತುವುದರೊಳಗಾಗಿ ಹಿಡಿದ ಕಾರ್ಯವನ್ನು ಸಾಧಿಸಲೆಬೇಕು. ಹಾವಿನ ಹಲ್ಲುಗಳನ್ನು ಬಿತ್ತುವುದಕ್ಕೆ ಮುಂಚಿತವಾಗಿ ಇದನ್ನು ನಿನ್ನ ಶಿರಸ್ತ್ರಾಣಕ್ಕೆ ಲೇಪಿಸಲು ಮರೆಯ ಬೇಡ. ಹೊಲದಿಂದ ಕಲಿಗಳು ಎದ್ದು ಬರುತ್ತಲೆ, ಅವರ ನಡುವೆ ಅದನ್ನೆಸೆದು ಬಿಡು. ರಣದೇವನಿಗೆ ಬಲಿಯು ತನ್ನಂತೆಯೆ ಅರ್ಪಿತವಾಗುವುದು!'—ಎಂದು ಅನುಗ್ರಹಿಸಿದಳು.

ಸುಧಾಕರನು ಉಲ್ಲಾಸದಿಂದ ಆ ಕಲ್ಕದ ಕರಡಿಗೆಯನ್ನು ತೆಗೆದುಕೊಂಡು ಮಾಧವಿಯ ಉದಾರತೆಯನ್ನು ಕೊಂಡಾಡಿದನು. ಆ ಮೇಲೆ ಮಾಧವಿಯು ಅಕ್ಕನೊಂದಿಗೆ ಮನೆಯತ್ತ ತೆರಳಿದಳು; ಸುಧಾಕರನು ಹಡಗಿನತ್ತ ಹಾರಿದನು.

ಸುಧಾಕರನು ಹಡಗಿನೊಳಗಿದ್ದ ಅನುಯಾಯಿಗಳೆಲ್ಲರನ್ನೂ ಎಬ್ಬಿಸಿ, ನಡೆದ ಸಂಗತಿಯನ್ನು ಹೇಳಿ, ಕರಡಿಗೆಯನ್ನು ತೋರಿಸಿದನು. ಎಲ್ಲರೂ ಹಿಗ್ಗಿಕೊಂಡರು. ಮೂಡಲು ಕೆಂಪು ಕಾಣುತ್ತಲೆ ಸುಧಾಕರನು ನದಿಯಲ್ಲಿ ಮಿಂದು ಬಂದು, ಅಡಿಯಿಂದ ಮುಡಿಯತನಕವೂ ಕಲ್ಕವನ್ನು ಸವರಿಕೊಂಡನು. ಗುರಾಣಿಗೂ ಶಿರಸ್ತ್ರಾಣಕ್ಕೂ ಆಯುಧಗಳಿಗೂ ಹಚ್ಚಿದನು. ಆ ಮೇಲೆ ವೀರರೊಂದುಗೂಡಿ ಕುಂತವನ್ನು ಮುರಿಯಲು ಯತ್ನಿಸಿದರು. ಆದರೆ ಅದು ಕಬ್ಬಿಣದ ಸರಳಂತಿತ್ತು! ಕತ್ತಿಯಿಂದ ಕಡಿದರು; ಕತ್ತಿಯು

ಬಾಯಿ ಹೋಯಿತಲ್ಲದೆ ಅದು ಬೇರೆ ತುಂಡಾಗಲಿಲ್ಲ! ಆ ಮೇಲೆ ಗುರಾಣಿಯ ಮಹತ್ವವನ್ನು ಪರೀಕ್ಷಿಸುವ ಸಲುವಾಗಿ ಬರ್ಚಿಗಳಿಂದ ತಿವಿದರು. ಬರ್ಚಿಯ ಮೊನೆಗಳೆ ಮೊಂಡಾದವು! ಚಂಡಸೇನನು ಆತನನ್ನು ಕೆಡವಿ ಹಾಕಲು ಯತ್ನಿಸಿದನು. ಆದರೆ ಸುಧಾಕರನು ಕಂಬದಂತೆ ಸ್ಥಿರನಾಗಿದ್ದನು! ಹಂಸಪುತ್ರನಾದ ವೇಗಶಾಲಿಯು ಆತನ ತಲೆಗೊಂದು ಬಲವಾದ ಗುದ್ದು ಗುದ್ದಿದನು. ಆ ಪೆಟ್ಟಿಗೆ ಎತ್ತಾದರೂ ಬಿದ್ದು ಹೋಗುತಿತ್ತು. ಆದರೆ ಸುಧಾಕರನು ನಕ್ಕು ಬಿಟ್ಟನು. ತಮ್ಮ ನಾಯಕನಿಗೆ ಇಂತಹ ಅಮಾನುಷ ಬಲವು ಬಂದುದನ್ನು ಕಂಡು, ವೀರರೆಲ್ಲರೂ ಸಂತಸದಿಂದ ನರ್ತಿಸತೊಡಗಿದರು. ಸುಧಾಕರನು ಕೂಡ ಸಂತಸದಿಂದ ಅತ್ತಿತ್ತ ಓಡಾಡಿದನು.

ಅಷ್ಟರಲ್ಲಿ ಹೊತ್ತು ಮೂಡಿತು. ಸುಧಾಕರನು ಇಬ್ಬರು ದೂತರನ್ನು ಮಿತ್ರಾವಸುವಿನ ಅರಮನೆಗೆ ಅಟ್ಟಿದನು. ಆ ದೂತರು ನಗರಕ್ಕೆ ಬಂದು, ಶಿಲಾಮಯವಾದ ಗೋಡೆಗಳನ್ನೂ ಹೊನ್ನು ಕೆತ್ತಿದ ಮಾಡುಗಳನ್ನೂ ಕಂಡು ಬೆರಗುಪಡುತ್ತ ಕೊನೆಗೆ ಮಿತ್ರಾವಸುವಿನ ಓಲಗಸಾಲೆಯಲ್ಲಿ ಬಂದು ನಿಂತರು.

"ಸೂರ್ಯಪುತ್ರನಾದ ಮಿತ್ರಾವಸು ರಾಜನೇ! ನೀನು ನಿನ್ನೆ ಆಡಿದಂತೆ ಇಂದು ಮಾಡುವೆಯಂತೆ! ಹಾವಿನ ಹಲ್ಲುಗಳನ್ನೀಚೆಗೆ ಕೊಡು! ಬಿಸಿಯುಸಿರಿನ ಎತ್ತುಗಳನ್ನು ಹರಿಬಿಡು! ನಮ್ಮೊಳಗೊಬ್ಬ ವೀರನಿರುವನು. ಆತನು ಹೊಂದೊವಲನ್ನು ಹೊಂದಿಯೇ ಹೊಂದುವನು!"—ಎಂದು ಒಕ್ಕಣಿಸಿದರು.

ಈ ಯುವನರು ತನ್ನ ಆಡಂಬರವನ್ನೂ ಊಳಿಗಗಳನ್ನೂ ಕಂಡು ಕೇಳಿ, ಅಂಜಿಕೊಂಡು ಓಡಿ ಹೋಗುವರೆಂದು ಮಿತ್ರಾವಸುವು ಎಣಿಸಿದ್ದನು. ಆದುದರಿಂದ ಆ ದೂತರನ್ನು ಕಂಡೊಡನೆಯೆ ಆತನಿಗೆ ಸಿಟ್ಟು ತಲೆಗೇರಿತು. ಅವರ ಮಾತುಗಳನ್ನು ಕೇಳಿಯಂತೂ ಹಲ್ಲು ಕಡಿಯ ಹತ್ತಿದನು! ಆದರೇನು? ನುಡಿಯಾಡಿ ಸಡೆಯುವುದುಂಟೇ? ಹಾವಿನ ಹಲ್ಲುಗಳನ್ನು ಕೊಡಿಸಿಯೆ ಕೊಡಿಸಿದನು. ಊರೊಳಗೆಲ್ಲ ಡಂಗುರ ಹೊಯ್ಸಿ, ತಾನೂ ಹೊಂದೇರನ್ನೇರಿ ರಣದೇವನ ಹೊಲಕ್ಕೆ ಹೋದನು.



# IX

ಕೊಂಚ ಹೊತ್ತಿನಲ್ಲಿಯೆ ಊರಿಗೆ ಊರೇ ಅಲ್ಲಿ ನೆರೆಯಿತು. ಮಿತ್ರಾವಸುವು ಭದ್ರಾಸನದಲ್ಲಿ ಕುಳಿತುಕೊಂಡನು. ಇಬ್ಬದಿಗಳಲ್ಲಿಯೂ ಅಯುತ ಮಿತಿಯ ಆಳುಗಳು, ಉಕ್ಕಿನ ಕಂಚುಕ ತೊಟ್ಟು ಸಾಲುಗಟ್ಟಿ ನಿಂತರು. ಹೆಂಗುಸರೂ ಗಂಡಸರೂ ಹಳೆಬರೂ ಎಳೆಯರೂ ಎಲ್ಲರೂ ಕಿಟಕಿಗಳಲ್ಲಿಯೂ ಗೋಡೆಗಳಲ್ಲಿಯೂ ದಂಡೆಗಳಲ್ಲಿಯೂ ಮರಗಳಲ್ಲಿಯೂ ಗುಂಪು ಸೇರಿದರು. ಇವರೆಲ್ಲರ ನಡುವೆ ಯುವನ ವೀರರ ತಂಡವು ಚಿಕ್ಕ ಚುಕ್ಕಿಯಂತೆ ಕಾಣಿಸಿತು.

ಪ್ರಭಾವತಿಯು ಮಗನೊಂದಿಗೆ ಅಲ್ಲಿಗೆ ಬಂದಿದ್ದಳು. ಮಾಧವಿಯು ಹತ್ತಿರಲೆ ಆವರಣದೊಳಗೆ ಅಡಗಿಕೊಂಡಿದ್ದಳು. ಆಕೆಯ ತುಟಗಳೆಡೆಯಿಂದ ನಿರಂತರವಾಗಿ ಮಾಯಾ ಮಂತ್ರಗಳು ಉದಿರುತ್ತಲಿದ್ದುವೆಂಬುದು ಆ ರಾಜನಿಗೇನು ಗೊತ್ತು? ಪಾಪ!

ಜನಸಂದಣಿಯು ಗೊಂದಲವು ಕೊಂಚ ತಣಿದಂತಾದೊಡನೆಯೆ ಸುಧಾಕರನು—'ರಾಜನೆ! ತಡವೇಕೆ? ಬೆಂಕಿಯ ಬಸವಗಳು ಬರಲಿ!'—ಎಂದು ಗರ್ಜಿಸಿದನು.

ಆಗ ಮಿತ್ರಾವಸುವಿನ ಹೇಳಿಕೆಯಂತೆ ಹಟ್ಟಿಯ ತಡೆಯನ್ನು ತೆಗೆದರು. ಮಾಯಾವಿಗಳಾದ ಎತ್ತುಗಳು ತಟ್ಟನೆ ಹೊರಕ್ಕೆ ಚಿಗಿದವು. ಗೊರಸಿನ ಕಣ ಕಣ ದನಿಯು ಕೇಳಿಸಿತು! ಸೊಳ್ಳೆಗಳ ಚುರುಚುರು ಬೆನ್ನಾಲಗೆಯು ಕಾಣಿಸಿತು! ತಲೆ ತಗ್ಗಿಸಿಕೊಂಡು ಸುಧಾಕರನೆಡೆಗೆ ಸುಯ್ಯನೆ ಸರಿದವು. ಆದರೆ ಸುಧಾಕರನು ಬೆಚ್ಚಿದನೆ? ಬೆದರಿದನೆ? ಒಂದು ಹಜ್ಜೆ ಕೂಡ ಹಿಂದಿಡಲಿಲ್ಲ! ಉರಿನಾಲಗೆಗಳು ಸುತ್ತುಮುತ್ತ್ತು ಹರಡಿಕೊಂಡವು. ಆದರೆ ಆತನ ಕೂದಲು ಕೂಡ ಕನಿಯಲಿಲ್ಲ! ಅಷ್ಟರಲ್ಲಿ ಅತ್ತಕಡೆ ಸಂಚುಗಾರ್ತಿ ಮಾಧವಿಯು ಮಂತ್ರಗಳನ್ನು ಪಟಪಟನೆ ಉದಿರಿಸಿದಳು. ಸುಧಾಕರನ ಸ್ಥೈರ್ಯಕ್ಕೂ ಮಾಧವಿಯ ಮಂತ್ರಕ್ಕೂ ಬೆಗಡುಗೊಂಡು ಎತ್ತುಗಳು ನಿಂತಲ್ಲಿಯೆ ನಿಂತು ನಡುಗ ತೊಡಗಿದವು! ಕೂಡಲೆ ಸುಧಾಕರನು ಹತ್ತಿರವಿದ್ದ ಎತ್ತಿನ ಕೋಡುಗಳನ್ನು ಹಿಡಿದು, ಅದರೊಡನೆ ಹೆಣಗಿ, ಅದನ್ನು ಅಂಕೆಗೆ ತಂದನು. ಸುಧಾ

ಕರನ ನಡುನೋಟದ ತೀಕ್ಷ್ಣತೆಗೂ ಮಾಧವಿಯ ಮಂತ್ರದ ಮಹಿಮೆಗೂ ಆ ಸತ್ವಶಾಲಿಯಾದ ಎತ್ತು ಎದೆಗುಂದಿತು. ಈ ರೀತಿ ಎರಡು ಎತ್ತುಗಳನ್ನೂ ಹಿಡಿದು ಪಳಗಿಸಿ, ನೊಗಕ್ಕೆ ಹೂಡಿ, ನೇಗಿಲನ್ನು ಜೋಡಿಸಿದನು. ಆ ಮೇಲೆ ಕುಂತದ ಕೊನೆಯಿಂದ ಕೆಣಕಿ, ರಣದೇವನ ಕಣವನ್ನು ಚೆನ್ನಾಗಿ ಉತ್ತನು.

ಈ ವಿಚಿತ್ರವನ್ನು ಕಂಡು ಯವನ ವೀರರು ಉಲ್ಲಾಸದಿಂದ ಉಬ್ಬಿದರು. ಮಿತ್ರಾವಸುವು ರೋಷದಿಂದ ಹಲ್ಲು ಕಡಿದನು. ಹೊತ್ತು ಏರುವುದರೊಳಗೆ ಸುಧಾಕರನ ಕೆಲಸದಲ್ಲಿ ಅರೆವಾಸಿ ಆಗಲೆ ಮುಗಿದಿತ್ತು. ಉತ್ತ ಮೇಲೆ ಹಾವಿನ ಹಲ್ಲುಗಳನ್ನು ಬಿತ್ತಿ, ಬೆಳೆಯ ಬರವನ್ನು ಹಾರೈಸಿಕೊಂಡು ಕುಳಿತನು.

ಇತ್ತ ಮಾಧವಿಯು, ತನ್ನ ಮಾತನ್ನು ಸುಧಾಕರನು ಎಲ್ಲಿಯಾದರೂ ಮರೆತಿರಬಹುದೊ ಎಂಬ ಅಂಜಿಕೆಯಿಂದ, ಒಂದು ಸಲ ಆತನ ಮುಖವನ್ನೂ, ಒಂದು ಸಲ ಆತನ ಕುಲಾವಿಯನ್ನೂ ನೋಡ ತೊಡಗಿದಳು.

ಅಷ್ಟರಲ್ಲಿ ಹೊಲವೆಲ್ಲವೂ ಉಕ್ಕುವುದಕ್ಕೆ ಹತ್ತಿತು. ನೋಡುನೋಡುತ್ತಿರುವಲ್ಲಿ ಉಕ್ಕು ತೊಟ್ಟ ವೀರರು ಸಾವಿರ ಗಟ್ಟಲೆಯಿಂದ ಎದ್ದು ಬಂದರು. ಕತ್ತಿಯನ್ನು ಹಿರಿದು ಸುಧಾಕರನ ಮೇಲೆ ಸಾಗಿದರು. ಇದನ್ನು ಕಂಡು ಯವನ ವೀರರು ತಮ್ಮ ನಾಯಕನಿಗೆ ಕೇಡು ತಟ್ಟೀತೆಂದು ತಳಮಳಿಸಿದರು. ಮಿತ್ರಾವಸುವು ತನ್ನ ತಂತ್ರದ ಫಲವನ್ನು ಕಂಡು ನಗುತ್ತ—'ಸಮಯ ಬಂದರೆ ನೆಲದಿಂದ ಕೂಡ ಆಳುಗಳನ್ನು ಕರೆಯುವ ಶಕ್ತಿಯಿದೆ ನನಗೆ!'—ಎಂದು ಹೀಯಾಳಿಸಿದನು.

ಆದರೆ ಇಂತಹ ಬೆಳೆಗೆ ಸುಲಭವಾದ ಕೊಯಿಲನ್ನು ಒದಗಿಸುವ ಯುಕ್ತಿಯನ್ನು ಸುಧಾಕರನು ಮರೆತಿರಲಿಲ್ಲ. ತಟ್ಟನೆ ತನ್ನ ಕುಲಾವಿಯನ್ನೆತ್ತಿ, ಯೋಧರ ಸಂದಣಿಯು ಮಂದವಾಗಿರುವಲ್ಲಿಗೆ ಎಸೆದು ಬಿಟ್ಟನು. ಆ ಕ್ಷಣದಿಂದಲೆ ಆ ಮಣ್ಣಿನಾಳುಗಳಲ್ಲಿ ಜಗಳಕ್ಕಿಟ್ಟಿತು. 'ಎಲಾ! ನನ್ನನ್ನೇಕೆ ಹೊಡೆದೆ?' ಎಂದು ಒಬ್ಬನು ಕೇಳಿದನು. 'ಸರಿ ಸರಿ! ನೀನೇ ಸುಧಾಕರನು! ಸಾವಿಗೆ ಎರವಾಗು!' ಎಂದು ಮತ್ತೊಬ್ಬನು ಗಜರಿದನು. ಹೀಗೆ ಎಲ್ಲರೂ ಭ್ರಾಂತರಾಗಿ, ಹೊಡೆದುಕೊಂಡು, ಅರೆಗಳಿಗೆಯಲ್ಲಿಯೆ ಮಡಿದು ಮಲಗಿದರು! ಹೊಲವು ಬಾಯ್ದೆರೆದು ಮಕ್ಕಳೆಲ್ಲರನ್ನೂ ಬಸಿರೊಳಗೆ ಸೆಳೆದು ಕೊಂಡಿತು.

ಆ ಮೇಲೆ ಹುಲ್ಲು ಬೆಳೆದು ಹೊಲವು ಮೊದಲಿನಂತೆಯೆ ಆಯಿತು. ಇಲ್ಲಿಗೆ ಸುಧಾಕರನ ನಿಯಮಿತ ಕಾರ್ಯವು ಕೊನೆಗಂಡಿತು.

ಈ ಸೋಜಿಗವು ಮುಗಿಯುತ್ತಲೆ ಯವನ ವೀರರು ಮುಂದೆ ಬಂದರು. ಸುಧಾಕರನು—'ಈ ಕ್ಷಣವೆ ಹೊಂದೊವಲಿನ ಬಳಿಗೆ ನನ್ನನ್ನು ಕರೆದು ಕೊಂಡು ಹೋಗು. ಹೊತ್ತು ಕಂತುವುದರೊಳಗೆನೇ ಆಗಲಿ!'—ಎಂದು ಗಜರಿದನು.

ಮಿತ್ರಾವಸುವು ಚಿಂತೆಗೊಳಗಾದನು. 'ಎತ್ತುಗಳನ್ನೂ ಒಲಿಸಿ ಕೊಂಡನು. ಬೆಳೆಯನ್ನೂ ಕೊಯ್ದುಕೊಂಡನು. ನನ್ನ ಮಾಯಾಮಂತ್ರವು ನಾಟದಿರ ಬೇಕಾದರೆ ಈತನು ಯಾರಾಗಿರ ಬಹುದು? ಇನ್ನು ಆ ಹಾವನ್ನು ಕೂಡ ಕೊಲ್ಲದಿರನು. ಆದುದರಿಂದ ಈಗೇನು ಮಾಡಲಿ?'—ಎಂದು ಚಿಂತಿಸಿ, ಸಚಿವರೊಂದಿಗೆ ಮಂತ್ರಣ ಮಾಡುತ್ತ, ಹೊತ್ತು ಮುಳುಗುವ ತನಕವೂ ಕಾಲಹರಣ ಮಾಡಿದನು. ಕತ್ತಲಾಗುತ್ತಲೆ ಎಲ್ಲರನ್ನೂ ಮನೆಗೆ ಕಳುಹಿ, ಯವನ ವೀರರು ಮರುದಿನ ಬಂದು ತನ್ನನ್ನು ಕಾಣುವಂತೆ ಆಜ್ಞಾಪಿಸಿದನು,

ಸುಧಾಕರನಿಗೆ ಸಹಾಯ ಮಾಡಿದುದು ಮಾಧವಿಯಲ್ಲದೆ ಬೇರೆಯಲ್ಲ ಎಂಬ ಯೋಚನೆಯು ಹೊಳೆದು, ರಾಜನು ಮಾಧವಿಯನ್ನು ನೋಡುತ್ತ— 'ಎಲೆಗೇ! ಮಾಯಾವಿನಿ! ಇದು ನಿನ್ನ ತಂತ್ರವೇ ಸರಿ! ನಿನ್ನೀ ಸಂಚಿನಿಂದ, ನೀನು ಈ ಹೊಂಗೂದಲಿನ ಪರದೇಶಿಗಳಿಗೆ ಅನುವಾಗಿ, ನನಗೆ ಅವಮಾನ ತಂದು ಹಾಕಿದೆ! ನಿನಗೂ ಕಳಂಕ ತಪ್ಪದು!'—ಎಂದು ಗದರಿಸಿದನು.

ಮಾಧವಿಯ ಮುಖದ ಕಳೆಯು ಕಂದಿತು. ಮೈ ನಡುಗ ಹತ್ತಿತು. ಇದನ್ನು ಕಂಡು ಮಿತ್ರಾವಸುವು ಆಕೆಯೆ ಅಪರಾಧಿನಿಯೆಂಬುದನ್ನು ಖಂಡಿತ ಮಾಡಿ ಕೊಂಡನು. 'ಹೂಂ! ಇರಲಿ! ಎಲ್ಲಿಯಾದರು ಹೊಂದೊವಲು ಹೋಯಿತೆಂದರೆ, ಅದರೊಂದಿಗೆ ನಿನ್ನ ಪ್ರಾಣಗಳೂ ಹೋದವೆಂದು ತಿಳಿ!'— ಎಂದು ತನ್ನ ಸಂಕಲ್ಪವನ್ನು ಸೂಚಿಸಿದನು.

ಇತ್ತ ಯವನ ವೀರರು ಕೈಗೆ ಬಂದ ತುತ್ತು ಬಾಯಿಗೆ ಬಾರದೆ ಹೋದ ಮರಿಸಿಂಗಗಳಂತೆ ಗುರುಗುಟ್ಟುತ್ತ ಹಡಗಿನೆಡೆಗೆ ನಡೆದರು. ಮಿತ್ರಾವಸುವು ತಮ್ಮನ್ನು ವಂಚಿಸುವುದರಲ್ಲಿರುವನೆಂದು ಅವರಿಗೆ ತಿಳಿಯಿತು. ತಮ್ಮ ಶ್ರಮ

ಕೆಲ್ಲವೂ ನಿರರ್ಥಕವಾಗುವುದೆಂದೂ ಹೊಳೆಯಿತು. ಒಬ್ಬೊಬ್ಬನು ಒಂದೊಂದು ಸಲಹೆ ಹೇಳ ತೊಡಗಿದನು. ಆ ತೋಪಿಗೆ ನುಗ್ಗಿ ಹೊಂದೊವಲನ್ನು ಬಲಾತ್ಕಾರದಿಂದ ಸೆಳೆದು ತರುವುದೆಂದು ಒಬ್ಬನ ಮತ. ಮೊದಲು ಹೋಗ ತಕ್ಕವನು ಯಾರೆಂಬುದಕ್ಕೆ ಚೀಟು ಹಾಕ ಬೇಕೆಂದು ಮತ್ತೊಬ್ಬನ ಮತ. ಹೆಬ್ಬಾವು ಒಬ್ಬನನ್ನು ನುಂಗುತ್ತಿರುವಾಗ ಉಳಿದವರು ಹೊಂದೊವಲನ್ನು ಕಿತ್ತುಕೊಂಡು ಬರ ಬೇಕೆಂದು ಮಗದೊಬ್ಬನ ಮತ! ಆದರೆ ಸುಧಾಕರನು ಇವರ ಯುಕ್ತಿಗಳನ್ನು ಕೊಂಡಾಡಿ, ಆ ಮಾಧವಿಯ ಮಾತೇ ತನ್ನ ಮತ ವೆಂದು ಆಕೆಯ ಬರವನ್ನೆ ಹಾರೈಸಿ ಕುಳಿತುಕೊಂಡನು.

ಕೊಂಚ ಹೊತ್ತಿನಲ್ಲಿ ಮಾಧವಿಯು ಬಂದೇ ಬಂದಳು. ಆಕೆಯಲ್ಲಿ ಮಾತಿಗಿಂತಲೂ ಮರುಕವೆ ಮುಂದಾಯಿತು. 'ನನ್ನ ಅಂತಿಮ ಕಾಲ ಬಂದಿದೆ! ನಾನು ಸಾಯಲೆ ಬೇಕು! ನಾನು ನಿಮಗೆ ನೆರವಾದೆನೆಂದು ಅಪ್ಪನು ಅರಿತುಕೊಂಡನು. ನಿಮ್ಮನ್ನೆ ಕೊಂದು ಬಿಡುತಿದ್ದನು! ಆದರೇನು ಮಾಡಲಿ? ನೀವು ಆಗಂತುಕರು; ನಿಮ್ಮ ಕೂದಲು ಕೂಡ ಕೊಂಕಲೀಯನು! ಅಯ್ಯಾ, ವೀರರಿರಾ! ಹೋಗಿರಿ, ಹೊರಟು ಹೋಗಿರಿ! ಕಡಲಿನಾಚೆಗಿದ್ದುಕೊಂಡು ಮೂಢೆಯಾದ ಈ ಮಾಧವಿಯ್ನು ಮಾತ್ರ ಮರೆಯ ಬೇಡಿರಿ!'—ಎಂದು ಹೇಳುತ್ತ ಅಳುವುದಕ್ಕೆ ಹತ್ತಿದಳು.

ವೀರರಿಗೂ ಅಳು ಬಂತು. 'ಅಮ್ಮಾ ಸಾವು ನಿನಗೆ ಸಿದ್ಧವಾದರೆ ನಮಗೂ ಸಿದ್ಧವೆಂದು ತಿಳಿ! ನಿನ್ನ ನೆರವಿಲ್ಲದೆ ಹೊಂದೊವಲು ನಮಗೆ ಬಾರದು. ಹೊಂದೊವಲಿಲ್ಲದೆ ಹಿಂದಕ್ಕೆ ಎಂದೂ ಹೋಗೆವು! ಹೆಣಗಾಡಿ ಇಲ್ಲಿಯೆ ನಮ್ಮ ಹೆಣಬೀಳುವುದು!'—ಎಂದು ತಮ್ಮ ನಿರ್ಧಾರವನ್ನು ತಿಳಿಸಿದರು.

ಸುಧಾಕರನು—'ಚೆನ್ನೆ! ನೀನು ಸಾಯಲೇಕೆ? ನಮ್ಮೊಂದಿಗೆ ಕಡಲಿ ನಾಚೆ ಓಡಿ ಬಂದು ಬಿಡು! ಆದರೆ ಹೊಂದೊವಲನ್ನು ಮಾತ್ರ ಮೊದಲು ತಂದುಕೊಡು. ಹೊಂದೊವಲ ಹೊಲಬು ನಿನಗಲ್ಲದೆ ಮತ್ತಾರಿಗೆ ತಿಳಿದಿರು ವುದು? ನೀನಲ್ಲವೆ ತೋಪಿನ ದೇವದಾಸಿ? ಹಂಚಿಕೆ ಮಾತ್ರ ಹೇಳಿಕೊಡು, ತೊವಲು ತರುತ್ತೇವೆ! ಆ ಮೇಲೆ ನೀನೂ ನಮ್ಮೊಂದಿಗೆ ಬರುವೆಯಂತೆ! ನನ್ನ ಪಟ್ಟದರಸಿಯಾಗುವೆಯಂತೆ! ಕಡಲ ತಡಿಯ ಇಳಾವರ್ತವನ್ನಾಳುವೆಯಂತೆ!' ಎಂದು ಆಸೆ ತೋರಿಸಿದನು.

ವೀರರೆಲ್ಲರೂ ಆಕೆಯ ಒಡೆತನಕ್ಕೊಪ್ಪಿಕೊಂಡು ಒತ್ತಾಯ ಮಾಡಿದರು. ಮಾಧವಿಯು ಮೊಗ ಮುಚ್ಚಿಕೊಂಡು ಮರುಗಿದಳು. ತನ್ನ ಬಂಧುಬಳಗ ವನ್ನೂ ಎಳವೆಯ ಬಳಿಕೆಯವರನ್ನೂ, ಹುಟ್ಟಿ ಬೆಳೆದ ಮನೆಯನ್ನೂ ಸ್ಮರಿಸಿ ಕೊಂಡು ಬಲು ಹೊತ್ತು ಅತ್ತಳು. ಕೊನೆಗೆ ಮೊಗವೆತ್ತಿ ಸುಧಾಕರನನ್ನು ಕಂಡು ಬಿಕ್ಕಿ ಬಿಕ್ಕಿ ಅಳುತ್ತ—'ಆಗಲಿ; ನೀವೆಂದಂತೆಯೆ ಆಗಲಿ! ಮನೆಯನ್ನೂ ಮಂದಿಯನ್ನೂ ಮರೆತುಬಿಟ್ಟು, ಪರವೂರಿನ ವೀರರೊಂದಿಗೆ ಸೇರಿಕೊಳ್ಳುವೆನು. ಈಗ ನಿಮಗೆ ಹೊಂದೊವಲ ಹೊಲಬನ್ನು ಹೇಳುತ್ತೇನೆ, ಕೇಳಿರಿ. ನಿಮ್ಮ ಹಡಗನ್ನು ತೋಪಿನ ಬಳಿಗೆ ತಂದು, ದಡದ ಬಳಿ ನಿಲಿಸಿರಿ. ಸುಧಾಕರನು ನಟ್ಟಿರುಳಲ್ಲಿ ತೀರಕ್ಕೆ ಬಂದು, ಪಾಗಾರದ ಬಳಿ ಕಾಣಿಸಿಕೊಳ್ಳಲಿ. ಆತನ ಬೆಂಬಲಕ್ಕೊಬ್ಬ ವೀರನೂ ಬರಲಿ!'—ಎಂದು ಸೂಚಿಸಿದಳು.

ಈ ಮಾತನ್ನು ಕೇಳುತ್ತಲೆ ವೀರರೆಲ್ಲರೂ ತಾನು ಮುಂದು ತಾನು ಮುಂದು ಎಂದು ಚಂದಿ ಹಿಡಿಯ ತೊಡಗಿದರು. ಮಾಧವಿಯು ಅವರೆಲ್ಲ ರನ್ನೂ ಸುಮ್ಮಗಿರಿಸಿ—'ಬೇಡ, ನೀವಾರೂ ಬೇಡ! ಗೀತಾಧರನು ಬಲು ಜಾಣ ನಂತೆ; ಪ್ರಪಂಚವನ್ನೆ ಮರುಳು ಮಾಡ ಬಲ್ಲನಂತೆ! ಆತನೆ ಬರಲಿ!'—ಎಂದು ನಿರ್ಧರಿಸಿ ಹೊರಟು ಹೋದಳು.

ಆಗಿನ ಕಾಲದಲ್ಲಿ ಗಾಯಕರೆಂದರೆ ಕೇವಲ ಗಾಯನದಲ್ಲಲ್ಲದೆ ರಣ ದಲ್ಲಿಯೂ ಪಾಂಡಿತ್ಯವನ್ನು ಹೊಂದಿದವರಾಗಿದ್ದರು. ಆದುದರಿಂದ ಮಾಧ ವಿಯ ಕಟಾಕ್ಷವು ತನ್ನ ಮೇಲೆ ಪಸರಿಸಿದದನ್ನು ಕಂಡು, ಗೀತಾಧರನು ಹಿಗ್ಗಿ ಹೋದನು.

ಹಾಗೆಯೆ ನಟ್ಟಿರುಳಲ್ಲಿ ಪಾಗಾರದ ಬಳಿ ಮಾಧವಿಯನ್ನು ಕಂಡರು. ಆಕೆಯ ಜತೆಯಲ್ಲಿ ಆಕೆಯ ತಮ್ಮನಾದ ಪಾಸವನು ನಿಂತಿದ್ದನು. ಆತ ನೊಂದು ಎಳೆಗುರಿಯನ್ನು ಹಿಡಿದುಕೊಂಡಿದ್ದನು. ಮಾಧವಿಯು ಇವರನ್ನು ರಣದೇವನ ಹೆಬ್ಬಾಗಿಲ ಬಳಿಗೆ ಕರೆದುಕೊಂಡು ಹೋದಳು. ಅಲ್ಲಿ ಆಕೆಯ ಹೇಳಿಕೆಯಂತೆ, ಸುಧಾಕರನು ಒಂದು ಹೊಂಡ ತೋಡಿದನು. ಕುರಿಯನ್ನು ಕೊಂದು ಅದರೊಳಕ್ಕೆ ಹಾಕಿದನು. ಆ ಮೇಲೆ ಮಾಧವಿಯು ಮಂತ್ರಿಸಿ, ಮೂಲಿಕೆಗಳಿಂದ ಮುಚ್ಚಿ, ಮಧುವನ್ನು ಸುರಿದಳು.

ಕೊಂಚ ಹೊತ್ತಾಗುತ್ತಲೆ ಹತ್ತಿರದಲ್ಲಿ ನೆಲ ಬಾಯಿಬಿಟ್ಟಿತು. ಆ ಬಿರಿಕಿನಿಂದ ಬೆನ್ನಾಲಗೆಗಳನ್ನು ಬೀರುತ್ತ ತ್ರಿಶಿರೆಯು ಹಾರಿಕೊಂಡು ಬಂದಳು. ಆಕೆಯ ಮರುಳು ನಾಯಿಗಳು ಅತ್ತಿಂದಿತ್ತ ಸುತ್ತುತಿದ್ದವು. ಆಕೆಗೆ ತಲೆಗಳು ಮೂರು—ಕುದುರೆಯದೊಂದು, ಹುಚ್ಚು ನಾಯದೊಂದು, ಬುಸುಗುಟ್ಟುವ ಹಾವಿನದೊಂದು! ಎರಡು ಕೈಗಳಲ್ಲಿಯೂ ಕತ್ತಿ! ಇಂತಹ ಭೀಕರೆಯು ಆ ಗಣಿಯೊಳಕ್ಕೆ ಚಿಗಿದು ಸಾಕಷ್ಟು ತಿಂದಳು! ಕುಡಿದಳು! ನಾಯಿಗಳೂ ತಿಂದು ಕುಡಿದವು! ಇಂತಹ ಅಸಹ್ಯತೆಗೆ ಅಂಜಿ, ಸುಧಾಕರ ಗೀತಾಧರರು ನಡುಗಿದರು. ಮಾಧವಿಯು ಕಣ್ಣುಗಳನ್ನು ಮರೆಮಾಡಿಕೊಂಡಳು. ಕೊನೆಗೆ ಆ ರಕ್ಕಸಿಯು, ನಾಯಿಗಳನ್ನು ಕರೆದುಕೊಂಡು, ಅಡವಿಯೊಳಗೆ ಎತ್ತಲೋ ಓಡಿಹೋದಳು.

ಇತ್ತ ಬಾಗಿಲಿನ ಬೀಗವು ಅಂತೆಯೇ ಕಳಚಿಕೊಂಡಿತು. ಹಿತ್ತಾಳೆಯ ಬಾಗಿಲುಗಳು ತೆರೆದುವು. ಕೂಡಲೆ ಈ ಕಳ್ಳರು ಒಳನುಗ್ಗಿದರು. ಎತ್ತೆತ್ತಲೂ ಕಗ್ಗತ್ತಲೆ! ಮುಗಿಲು ಮುಟ್ಟುವ ಮರಗಳು! ವಿಷದ ಬಳ್ಳಿಗಳು! ಮುಳ್ಳಿನ ಬಲ್ಲೆಗಳು! ಹೋಗಲು ಹಾದಿಯಿಲ್ಲ! ಆದರೂ ಆ ಹೊಂದೊವಲಿನ ಹೊಳೆಪಿನಿಂದ ಹಾದಿಹಿಡಿದು ಮುನ್ನಡೆದರು. ಕೊನೆಗೆ ಹೇಗಾದರೂ ಆ ತೊವಲಿನೆಡೆಗೆ ಬಂದರು. ಸುಧಾಕರನು ಹಿಂದುಮುಂದು ನೋಡದೆ ಹಾರಿಹೋಗಿ, ಅದನ್ನು ಕಿತ್ತು ತೆಗೆಯುವುದರಲ್ಲಿದ್ದನು. ಮಾಧವಿಯು ತಟ್ಟನೆ ಆತನನ್ನು ತಡೆದು ನಿಲಿಸಿ, ನಡುಗುತ್ತ ಮರದ ಬುದಕ್ಕೆ ಬೆರಳು ತೋರಿಸಿದಳು. ಅಲ್ಲಿ ದೊಡ್ಡದೊಂದು ಹೆಬ್ಬಾವು ಚಂದ್ರಿಕೆ ಹಾಕಿಕೊಂಡು ಮಲಗಿತ್ತು. ಎಷ್ಟು ಮಾರು ಉದ್ದವಿತ್ತೆಂದು ಗೊತ್ತುಮಾಡಲಾಗಲಿಲ್ಲ. ಬೇರುಗಳೆಡೆಯಲ್ಲಿ ಎಲ್ಲಿ ನೋಡಿದರೂ ಹಾವಿನ ಕಂದುಬಣ್ಣವೂ ಹೊಂಬಣ್ಣವೂ ಕಾಣಿಸುತಿತ್ತಲ್ಲದೆ ನೆಲವೆಲ್ಲಿಯೂ ಕಾಣಿಸದು! ಇಷ್ಟಾಗಿ ಇವರು ಕಂಡುದು ಹಾವಿನ ತಲೆಯ ಭಾಗ ಮಾತ್ರವಲ್ಲದೆ, ಬಾಲದ ಭಾಗವು ಎಲ್ಲಿ ಅಡವಿಯ ಮೂಲೆಯಲ್ಲಿತ್ತೊ ಇವರಿಗೆ ತಿಳಿಯದು!

ಈ ಹಾವು ಇವರು ಬಂದ ಸದ್ದಿಗೆ ತಲೆಯೆತ್ತಿ, ಚುಕ್ಕಿ ಕಣ್ಣುಗಳಿಂದ ಸುತ್ತಲೂ ನೋಡಿ, ಸೀಳು ನಾಲಗೆಯನ್ನು ಹೊರಕ್ಕೆ ನೀಡಿ, ಕಾಳ್ಗಿಚ್ಚು ಭೋರ್ಗರೆಯುವ ದನಿಯಿಂದ ಬುಸುಗುಟ್ಟಿತು! ಕಾಡೆಲ್ಲವೂ ನಡುಗಿತು! ಮರ

ಗಳು ಬೇರು ಹಿಡಿದು ಎಲೆಯ ತನಕವೂ ಅದಿರಿತು! ಈ ದನಿಯು ನದಿಗೂ ಕೇಳಿಸಿತು, ನಗರಕ್ಕೂ ಕೇಳಿಸಿತು. ಮಲಗಿದ್ದ ಮಂದಿಗಳು ಬೆಚ್ಚಿ ಬಿದ್ದರು! ಹೆತ್ತವ್ವಗಳು ಎಳೆಗೂಸುಗಳನ್ನು ಎದೆಗೆ ಅಪ್ಪಿಕೊಂಡರು.

ಆದರೆ ಮಾಧವಿಯು ಮಾತ್ರ ಮೈಮರೆಯದೆ ಹಾವನ್ನು ಮೆತ್ತಗೆ ಕರೆದಳು. ಅದು ಕತ್ತೆತ್ತಿ ಆಕೆಯ ಕೈ ನೆಕ್ಕಿತು. ತೀನಿಯನ್ನು ಬೇಡುವಂತೆ ಆಕೆಯ ಮೊಗವನ್ನೆ ನೋಡತೊಡಗಿತು. ಮಾಧವಿಯು ಗೀತಾಧರನಿಗೆ ಸನ್ನೆ ಮಾಡಿದಳು. ಆತನು ಕೂಡಲೆ ವೀಣೆಯನ್ನು ನುಡಿಸತೊಡಗಿದನು. ಅದರೊಂದಿಗೆ ಮೋಹಿನೀಗೀತವನ್ನು ಹಾಡಿದನು. ಕೂಡಲೆ ವನವೆಲ್ಲವೂ ನೀರವವಾಯಿತು. ಎಲೆಗಳು ಅಲುಗವು! ಹಾವಿನ ತಲೆಯು ತಗ್ಗುತ್ತ ಬಂತು. ಚಂದ್ರಿಕೆಯು ಜೆರೆತುಕೊಂಡಿತು. ಕಣ್ಣುಗಳು ಮುದುಡಿಕೊಂಡವು. ಉಸಿರು ಮಂದವಾಯಿತು. ಅಷ್ಟರಲ್ಲಿ ಗೀತಾಧರನು ನಿದ್ರಾದೇವಿಯನ್ನು ಸ್ಮರಿಸಿದನು. ಕೂಡಲೆ ಹೆಬ್ಬಾವಿಗೆ ಮಬ್ಬು ಕವಿಯಿತು.

ಇದನ್ನು ಕಂಡು ಸುಧಾಕರನು ಮೆಲ್ಲನೆ ಮುಂದಕ್ಕೆ ಹಾರಿ, ಹೆಬ್ಬಾವನ್ನು ದಾಟಿ, ಹೊಂದೊವನ್ನು ಮರದಿಂದ ಕಿತ್ತು ತೆಗೆದುಕೊಂಡನು, ಆ ಮೇಲೆ ಆ ನಾಲ್ವರೂ ಅಲ್ಲಿಂದ ಕಾಲು ಕಿತ್ತರು. ಕ್ಷಣಮಾತ್ರದಲ್ಲಿ ನದೀತೀರಕ್ಕೆ ಬಂದು, ತಾರಿಣಿಯೊಳಗೆ ಸೇರಿಕೊಂಡರು. ಸುಧಾಕರನು ಹೊಂದೊವಲನ್ನೆತ್ತಿ ಹಿಡಿದು,—'ತಾರಿಣಿ! ತಾರಿಣಿ! ತೊವಲು ದೊರೆಯಿತು! ಕೀರ್ತಿಯು ಬಂತು! ಇನ್ನು ಗಂಧರ್ವಗಿರಿಯನ್ನು ಕಾಣುವ ಬಯಕೆ ಇರುವುದಾದರೆ, ಕೂಡಲೆ ನೀರ ಮೇಲೆ ಹಾರಿಕೊಂಡು ಹೋಗು, ನೋಡೋಣ!'—ಎಂದು ಗಜರಿದನು. ಕೂಡಲೆ ವೀರರು ಅರಿತ್ರಗಳಿಗೆ ಕೈಗೊಟ್ಟರು. ತಾರಿಣಿಯು ನಿಯಾಮಕನ ಮಾತಿಗೆ ಮಾನಕೊಟ್ಟು ಹಾರತೊಡಗಿತು. ಗೀತಾಧರನು ದಣಿವೇರದಂತೆ ಗಾಯನಕ್ಕೂ ಆರಂಭಿಸಿದನು. ಪ್ರಭಾಮಂಡಲವೂ ಹಿಂದುಳಿಯಿತು; ಮಿತ್ರಾವಸುವೂ ಹಿಂದುಳಿದನು! ಮಾಧವಿಯು ಮಾತ್ರ ಮುಂದಾಗಿದ್ದಳು!



# X

ಮಿತ್ರಾವಸುವು ಕಳವಿನ ಸುದ್ದಿ ಕೇಳಿ ಕಡಲ ತಡಿಗೆ ಬಂದು ಹಡಗು ಪಡೆಯನ್ನು ಕೂಡಿಸಿದನು. ತಡವಿಲ್ಲದೆ ಹೊರಡಿಸಿದನು. ತಾರಿಣಿಯನ್ನು ಹಿಡಿಯಲೋಸುಗ ಹಿಂಬಾಲಿಸಿದನು. ಅಷ್ಟರಲ್ಲಿ ತಾರಿಣಿಯು ಮಾತ್ರ ಎಷ್ಟೋ ಗಾವುದ ಪಡುಗಡೆ ನಡೆದಿತ್ತು.

ಬೆಳಕು ಹರಿಯಿತು. ತಾರಿಣಿಯೊಳಗೆ ತೀವ್ರಲೋಚನನೆಂಬ ವೀರ ನೊಬ್ಬನಿದ್ದನು. ಹೆಸರಿಗೆ ತಕ್ಕಂತೆ ಗುಣವೂ ಆತನಲ್ಲಿ ಅಡಕವಾಗಿತ್ತು. ಆತನು ಮೂಡಲು ಕಂಡು—'ಅದೊ! ಅಲ್ಲಿ ನೂರಾರು ಹಡಗುಗಳು ಬರುತ್ತಿವೆ! ಬೆಳ್ಳನೆ ಅಂಚೆಗಳಂತೆ ಕಾಣಿಸುತ್ತಿವೆ!'—ಎಂದು ಎಚ್ಚರಿಸಿದನು. ಹಡಗು ಗಳೇನೊ ಹಲವು ಹರದಾರಿ ದೂರದಲ್ಲಿದ್ದವು. ಆದರೂ ಯುವನವೀರರು ತಾರಿಣಿಯನ್ನು ಮತ್ತೂ ವೇಗವಾಗಿ ನಡೆಯಿಸ ತೊಡಗಿದರು. ಆದರೆ ಇವರೆಷ್ಟು ಮಾಡಿದರೂ ಆ ಪಡೆಯು ಗಳಿಗೆಗಳಿಗೆಗೂ ಹತ್ತಿರಹತ್ತಿರ ಬರುತಿತ್ತು.

ಕೊನೆಗೆ ತಾರಿಣಿಯು ಸೋಲುವುದಕ್ಕಾಯಿತು. ಇದನ್ನು ಕಂಡು ಕಠೋರ ಹೃದಯೆಯಾದ ಮಾಧವಿಯು ಕೊಲೆಗೆಲಸಕ್ಕೆ ಕೈಹಾಕಿದಳು. ತನ್ನ ಕಿರುತಮ್ಮ ವಾಸವನನ್ನು ಕೊಂದು ಕಡಲಿಗೆಸೆದು ಬಿಟ್ಟಳು! ಈ ಶವ ವನ್ನು ಕಂಡು ತಂದೆಯು ಅದರ ಸಂಸ್ಕಾರಕ್ಕೆ ಹೊರಟನೆಂದರೆ ತಾವು ಪಾರ ಗಾಣ ಬಹುದೆಂದು ಯೋಚಿಸಿದಳು. ಇದನ್ನು ಕಂಡು ಯುವನ ವೀರರೆಲ್ಲರೂ ಅಂಜಿದರು; ಹೇಸಿದರು! ಆದರೂ ಆಕೆಯನ್ನು ಶಿಕ್ಷಿಸಲಿಲ್ಲ. ಎಷ್ಟೆಂದರೂ ತಾವು ಆಕೆಯ ಋಣಿಗಳು! ಹೊಂದೊವಲನ್ನು ಹೊಂದಿಸಿ ಕೊಟ್ಟವಳು ಅವಳೇ ಅಲ್ಲವೆ?

ಕೊಂಚ ಹೊತ್ತಿನಲ್ಲಿಯೆ ಮಿತ್ರಾವಸುವು ಮಗನ ಶವವು ತೇಲು ತಿದ್ದಲ್ಲಿಗೆ ಬಂದನು. ಅದನ್ನೆತ್ತಿಕೊಂಡು ಬಲು ಹೊತ್ತು ಹಲುಬಿದನು. ಕೊನೆಗೆ ಅದರ ಸಂಸ್ಕಾರಕ್ಕಾಗಿ ತಾನು ಹಿಂದಕ್ಕೆ ಹೊರಟನು. ಕೆಲವು ಹಡಗುಗಳನ್ನು ಮುಂದೊತ್ತಲು ಹೇಳಿದನು. 'ತನ್ನಿರಿ ತನ್ನಿರಿ! ಆ ರಕ್ಕಸಿ ಯನ್ನು ಸೆಳೆದು ತನ್ನಿರಿ! ಸಾವಿನ ಸೋಜಿಗ ನೋಡಲಿ! ಆಕೆಯನ್ನು ತಾರದೆ

ಹೋದರೆ ನೀವೇ ಸಾವಿಗೆ ಎರವಾದೀರಿ!'—ಎಂದು ಕಠೋರವಾದ ಕಟ್ಟು ಮಾಡಿದನು.

ಇಷ್ಟೆಲ್ಲ ಗೋಳಾಟವೂ ಮಾತುಕತೆಗಳೂ ನಡೆದು, ಹಡಗು ಪಡೆಯು ಮುಂದುವರಿಯುವಷ್ಟಕ್ಕೆ ಯುವನರು ಎಲ್ಲಿಯೋ ಕಣ್ಮರೆಯಾಗಿ ಹೋಗಿದ್ದರು. ಆದುದರಿಂದ ಅವರೊಂದೆಡೆ ಸುಳಿದರು; ಇವರೊಂದೆಡೆ ಸರಿದರು. ಹೀಗಾಗಿ ತಾರಿಣಿಗೆ ಈ ಗಂಡವು ತಪ್ಪಿ ಹೋಯಿತು. ಆದರೆ ಪಾತಕದ ಫಲವು ತಪ್ಪುವುದುಂಟೆ? ದೇವಾಧಿದೇವನು ಇಲ್ಲಿ ನಡೆದ ಕೊಲೆಯನ್ನು ಕಂಡು, ಬಿರುಗಾಳಿಯನ್ನಟ್ಟಿದನು. ತಾರಿಣಿಯು ಕಂಡ ಕಡೆ ಅಲೆಯುವಂತಾಯಿತು. ಅಲೆ ಹೊಡೆಯಿತು! ನೊರೆ ನೆರೆಯಿತು! ಇಬ್ಬನಿ ಕವಿಯಿತು! ಹೊತ್ತೇ ಕಾಣದಂತಾಯಿತು! ಕೊನೆಗೆ ಹಲವು ದಿನಗಳನಂತರ ಒಂದೆಡೆ ಮಳಲ ದಿಣ್ಣೆಯ ಮೇಲೆ ಹಡಗು ಹಾಯಿತು. ದಿಕ್ಕೂ ತೋರದು; ದೇಶವೂ ಕಾಣದು! ಯುವನರು ಜೀವದ ಹಂಗು ತೊರೆಯುವಷ್ಟಕ್ಕೆ ಬಂತು!

ಆಗ ಸುಧಾಕರನು ತಾರಾದೇವಿಯಲ್ಲಿ ಮೊರೆಯಿಟ್ಟನು.

'ಹೇ ದೇವಿ!

ದೀನರೆಮ್ಮನು ತೊರೆಯಲೇತಕೆ ಮೊರೆಯನಾಲಿಸಿ ಪಾಲಿಸ ।<br>
ಜನರದಾವರೊ ನಾಡದಾವುದೊ ಕಾಣಲಾರೆವೆ ಕಾಣೆವೆ ॥<br>
ಹೀನವಲ್ಲದ ಮಾನ ಹೊಂದಿಹೆವೆಂತು ನೀಗುವೆವೀಗಲೆ ।<br>
ಜನುಮದಾತೆಯ ಯುವನಮಾತೆಯ ತಡಿಗೆ ಸಾಗಿಸ ಸಾಗಿಸ ॥'

ನಾಯಕನ ಗೋಳನ್ನು ಕೇಳುತ್ತಲೆ ಹಡಗಿನ ಕೊಂಬಿನಲ್ಲಿದ್ದ ದೈವಿಕವಾದ ಕೊಂಬೆಯಿಂದ ನುಡಿ ಹೊರಟಿತು—'ಪಿತೃದೇವನಾದ ಬೃಹಸ್ಪತಿಯ ಕೋಪವೆ ಅವದಶೆಗೆ ಕಾರಣ! ಕೊಲೆಯಿಂದ ಪೊಲೆಯಾದ ಹಡಗು ಹೇಗೆ ತಾನೆ ಹಾದಿ ಹಿಡಿದೀತು!'

ಈ ನುಡಿಯನ್ನು ಕೇಳಿ ಕೆಲವರು ರೇಗಿಕೊಂಡರು. ಮೂಲವನ್ನೆ ಮುರಿಯ ಬೇಕೆಂದು ಹವಣಿಸಿ,—'ಮಾಧವಿಯೆ ಕೊಲೆಗಡಿಕಿ! ಬಿತ್ತಿ ಬೆಳೆದುದನ್ನು ತಿಂದು ತೇಗಲಿ! ಆಕೆಗೆ ಮರಣವೆ ಮೇಲು!'—ಎಂದು ಹೇಳುತ್ತ, ಅವಳನ್ನು ಹಿಡಿದೆತ್ತಿ ಕಡಲಿನೊಳಕ್ಕೆ ಬಿಸುಡುವುದರಲ್ಲಿದ್ದರು. ಅಷ್ಟರಲ್ಲಿ ಆ ಕೊಂಬೆಯು ಪುನಃ ಮಾತನಾಡಿತು—'ಪಾತಕವು ಪರಮಾವಧಿಗೆ ಬಾರದೆ

ಮರಣವು ಬರಬಾರದು! ಪಾತಕಿಗೆ ಯಾತನೆಯು ಎಂದೂ ತಪ್ಪದು! ಈಕೆಯು ಬದುಕಿಕೊಳ್ಳಲಿ! ನಿಮಗೆ ಗುಣವುಂಟು! ಈಕೆಯ ಸಹೋದರಿ ಸಾವಿತ್ರಿಯಿರುವಲ್ಲಿಗೆ ನಿಮ್ಮನ್ನು ಕರೆದುಕೊಂಡು ಹೋಗಲಿ! ಬಲು ದೂರ ಪಡುವಲು ಪೋಗಲಿಕ್ಕಿದೆ! ಆದರೂ ದಣಿಯಿರಿ! ಆಕೆಯಿಂದಲ್ಲದೆ ಹೊಲೆಯು ಹೋಗದು!' ಎಂದು ತೀರ್ವಾನ ಹೇಳಿತು.

ಈ ಮಾತನ್ನು ಕೇಳಿ ವೀರರೆಲ್ಲರೂ ಮಮ್ಮಲ ಮರುಗಿದರು. ಯೋಜನಗಟ್ಟಲೆ ಯಾನ! ಮಾನಗಟ್ಟಳೆ ದಣಿವು! ಯಾರಿಗೂ ಅಂಜಿಕೆ ಬಾರದಿರುವುದೇ? ಕೆಲವರು ಆ ಮಾಯಾವಿನಿಯನ್ನು ಜರೆದರು. ಮತ್ತೆ ಕೆಲವರು — 'ಇಲ್ಲ ಇಲ್ಲ, ನಾವಾಕೆಯ ಋಣಿಗಳು. ನಮಗೆ ಹೊಂದೊವಲು ದೊರೆತುದು ಆಕೆಯಿಂದಲ್ಲದೆ ಮತ್ತೆ ಬೇರೆಯಲ್ಲ!'— ಎಂದು ಸಮಾಧಾನ ಮಾಡಿಕೊಂಡರು. ಆದರೆ ಹಲವರು ಮನದೊಳಗೆನೇ ಹಲ್ಲು ಕಡಿಯುತಿದ್ದರು. ಮಂತ್ರದ ನೋಟಕ್ಕೆ ಬೆದರಿ ಬಾಯಿ ಬಿಡಲಿಲ್ಲ.

ಅಷ್ಟರಲ್ಲಿ ಕಡಲು ತಣಿಯಿತು. ಬಿಸಿಲು ಕಾಯಿತು. ವೀರರು ನಾವೆಯನ್ನು ಮಳಲಿಂದಾಚೆಗೆ ತಳ್ಳಿದರು. ಮಾಯಾವಿನಿಯು ಹಾದಿ ಹೇಳಿದಳು. ಕೊನೆಗಾಣದ ಹಾದಿ ಹಿಡಿದು ಕಂಡರಿಯದ ಕಡಲಿಗೆ ಸಾಗಿದರು.

ಅವರೆತ್ತ ಹೋದರೊ ನಾನರಿಯೆ! ಸಾವಿತ್ರಿಯು ನೆಲಸಿದ್ದ ನಡುಗಡ್ಡೆಗೆ ಹೇಗೆ ಬಂದರೊ ಯಾರು ಬಲ್ಲ? ಪಡುವಲು ಹೋಗಿ ಹೊಳೆಗಳನ್ನು ಹಾದು, ಕಡಲನ್ನು ದಾಟ, ಗಿರಿಗಳ ಮೇಲೆ ಪದಗನ್ನೆಳೆದು, ಅಲ್ಲಿಗೆ ಮುಟ್ಟಿದರೆಂದು ಕೆಲವರು ಹೇಳುವರು. ತೆಂಕಲು ಹೋಗಿ ತೆಂಗಡಲನ್ನು ಕಂಡು, ಬೆನ್ನೆಲದ ಹಿಮೆಗಳನ್ನು ದಾಟ, ಪಡುವಲು ತಿರುಗಿ, ಕೊನೆಗೊಂದು ಮರುಭೂಮಿಗೆ ಬಂದು, ಕಾದ ಮರಳ ಮೇಲೆ ಪಡಗನ್ನು ಹಲವು ಗಾವುದ ಎಳೆದುಕೊಂಡು ಬಂದು, ಎಂತೋ ಸಾವಿತ್ರಿಯ ನಾಡನ್ನು ಮುಟ್ಟಿದರೆಂದು ಇನ್ನು ಕೆಲವರ ಅಭಿಪ್ರಾಯ. ಹೇಗೂ ಇರಲಿ. ಹಾದಿಯಲ್ಲಿ ಹಲವು ವಿಚಿತ್ರಗಳನ್ನು ಕಂಡರು. ಒಂದೆಡೆ ನಂಜಿನ ಕಣೆಗಳನ್ನೆಸೆದು ಕೊಲ್ಲುವ ಜನರು! ಮತ್ತೊಂದೆಡೆ ನರರನ್ನೆ ನುಂಗಿಬಿಡುವ ರಕ್ಕಸರು! ಬೇರೊಂದೆಡೆ ಧ್ರುವಮಂಡಲದ ಬಳಿ ಮಂದೆ ಮೇಯಿಸುವ ಕುರಿಜನರು! ಇಂತಹ ಬಗೆಬಗೆಯ ಜನರನ್ನು ಕಂಡುಕೊಂಡು, ಬಡಗುನಾಡಿನ ತಡಿಗೆ ಬಂದರು. ಆ ಮೇಲೆ ಹಡಗು ನಡೆಯದು. ವೀರರ

ಎದೆ ನೀರಾಯಿತು. ಹಸಿವೊಂದೆಡೆ, ದಣಿವೊಂದೆಡೆ. ಸಾವು ಸನ್ನಿದವೆಂದೆಣಿಸಿ, ಕೈಯ ಮೇಲೆ ತಲೆಯನ್ನಾನಿಸಿಕೊಂಡು ಚಿಂತೆಗೆ ಮಾರುವೋದರು.

ಆಗ ಕರ್ಣಧಾರನಾಗಿದ್ದ ಗೃಹಮಿತ್ರನು ಅವರನ್ನು ಹುರುಪುಗೊಳಿಸಿದನು. ಅವನ ಮಾತಿನಂತೆ ವೀರರು ಹಗ್ಗಗಳನ್ನೂ ಉರುಳಿಗಳನ್ನೂ ತೆಗೆದುಕೊಂಡರು. ಅವುಗಳ ನೆರವಿನಿಂದ ನೆಲವೆನ್ನದೆ ಹಿಮವೆನ್ನದೆ ಕೆಸರೆನ್ನದೆ ಮರಳೆನ್ನದೆ ಹಗಲೆನ್ನದೆ ಇರುಳೆನ್ನದೆ ಹಲವು ದಿನಗಳ ತನಕ ಹಡಗನ್ನು ಎಳೆದುಕೊಂಡು ಹೋದರು. ಕೊನೆಗೊಂದು ಕಡಲು ಕಂಡಿತು.

ಅಷ್ಟರಲ್ಲಿ ಕರ್ಣಧಾರನು—'ಗೆಳೆಯರೆ! ಕೊಂಚ ತಾಳ್ಮೆ ತಂದುಕೊಳ್ಳಿರಿ. ಗಂಡವು ಕೊನೆಗಂಡಿತು. ಪಡುವಲ ಗಾಳಿಯು ಅಲೆಗಳನ್ನಾಡಿಸುತ್ತಿದೆ. ಸಾಗರದ ಮೊರೆಯು ಕೇಳಿಸುತ್ತಿದೆ. ಹಾಯಿಗಳನ್ನು ಹರಡಿರಿ. ಬರುವುದು ಬರಲಿ!'—ಎಂದು ಉಲ್ಲಾಸಗೊಳಿಸಿದನು.

ಕೂಡಲೆ ಕೊಂಚೆಯು ನುಡಿಯಿತು—'ಅಯ್ಯಯ್ಯೊ! ನನಗಿದರ ಮೊದಲೆ ಅಳಿವು ಬರಬಾರದಿತ್ತೆ? ಬಂಡೆಗಳೆಡೆಯಲ್ಲಿ ಸಿಲುಕಿಯಾಗಲಿ, ನೆರೆಯ ಸುಳಿಯೊಳಗೆ ಮುಳುಗಿಯಾಗಲಿ, ಅಂದೇ ಮಡಿದಿದ್ದರೆ ಲೇಸಾಗಿತ್ತು! ವಾಸವನ ಕೊಲೆಯ ಹೊಲೆಯನ್ನು ಕಟ್ಟಿಕೊಂಡು ಎಷ್ಟೆಂದು ಎಲ್ಲೆಂದು ಅಲೆಯಲಿ? ಆಪದಗಳು ಒಂದರ ಮೇಲೊಂದು ಅಲೆಗಳಂತೆ ಬರುತ್ತಿರುವವು! ಈಗಲೀಗ ಆ ಕಾಣುವ ನಡುಗುಡ್ಡೆಯ ಬಳಿಗೆ ಹೋದರೆ ಏನಾದರೂ ವಿಪತ್ತು ತಟ್ಟದಿರದು! ಕರೆಯನ್ನೆ ಕಂಡುಕೊಂಡು, ತೆಂಕಲು—ತೆಂಕಲೆ ಹೋಗದೆ ಹೋದರೆ, ಎಲ್ಲೆಯಿಲ್ಲದ ಕಡಲೊಳಗೆ ಅಲೆದಲೆದು ಅಳಿಯದಿರೆವು!'—ಎಂದು ನುಡಿಯಿತು.

ಕೊಂಚೆಯ ಈ ಸಲಹೆಯನ್ನು ಕೇಳಿ, ವೀರರು ಅದನ್ನು ಹರಸಿ ಹಾಡಿದರು. ಅದರಂತೆಯೆ ಮಾಡಿದರು. ಆದರೆ ಆ ಗಡ್ಡೆಯನ್ನು ದಾಟಿ ಹೋಗುವುದರೊಳಗಾಗಿಯೆ ಬಿರುಗಾಳಿ ಬೀಸತೊಡಗಿತು. ನಾವೆಯು ಗರ್ರನೆ ತಿರುಗಿತು. ಅಂಕೆಗೆ ಬರಲಿಲ್ಲ. ಹನ್ನೆರಡು ದಿನಗಳ ತನಕವೂ ಆ ಪಡುಗಡಲೊಳಗೆ ಎಲ್ಲಿಯೊ ಸುತ್ತುತಿತ್ತು. ನೊರೆಯೂ ಮಂಜೂ ಮುಸುಕಿದ್ದುದರಿಂದ ಹೊತ್ತೂ ಕಾಣದು, ದಿಕ್ಕೂ ತೋರದು. ಅಂತಿಮ ಕಾಲವು ಬಂತೆಂದು ಭಾವಿಸಿದರು. ಅಷ್ಟರಲ್ಲಿ ತೀವ್ರಲೋಚನನು—'ಗೆಳೆಯರೆ! ಆಸೆ ತೊರೆಯ

ಬೇಡಿರಿ. ದೂರದಲ್ಲಿ ಮರಮಟ್ಟುಗಳು ಕಾಣಿಸುತ್ತಿವೆ. ಊರೂ ಇರಬೇಕು. ಮುಗಿಲು ಮುಸುಕಿರುವುದು.'—ಎಂದು ಕೂಗಿ ಹೇಳಿದನು.

ಗೀತಾಧರನು ಮಾತ್ರ ಅಳುಕಿದನು.—'ತಿರುಗಿರಿ, ತಿರುಗಿರಿ! ಅಲ್ಲಿ ಇಳಿಯಲು ಎಡೆಯಿಲ್ಲ. ಸುತ್ತಲೂ ಕಡಿದಾದ ಕಲ್ಲುಗಳಲ್ಲದೆ ಮತ್ತೇನೂ ಇರದು'— ಎಂದು ಎಚ್ಚರಿಸಿದನು.

ಆದುದರಿಂದ ಕರ್ಣಧಾರನು ನಾವೆಯನ್ನು ಬೇರೆ ಕಡೆಗೆ ತಿರುಗಿಸಿದನು. ಮೂರು ದಿನದ ಹಾದಿ ಸಾಗಿತು. ಕೊನೆಗೆ ಸಾವಿತ್ರಿಯ ನಾಡು ಕಾಣಿಸಿತು ಅಲ್ಲಿಗೆ ಬಂದೊಡನೆಯೆ, ಸುಧಾಕರನು ಕೆಲವರನ್ನು ತೀರಕ್ಕೆ ಹೋಗಿ ಜನ ವಸತಿಯ ಕುರುಹನ್ನು ಕಂಡುಕೊಂಡು ಬರಲು ಕಳುಹಿದನು. ಅವರು ಕೊಂಚ ಮುಂದೆ ಒಳನಾಡಿಗೆ ಹೋಗುವಾಗ ಸಾವಿತ್ರಿಯು ಹಡಗಿದ್ದಲ್ಲಿಗೆ ಬರುತ್ತಿರುವುದು ಕಂಡಿತು. ಆಕೆಯನ್ನು ಕಂಡು ಅವರು ಅಂಜಿದರು. ಆಕೆಯ ಮೊಗವೂ ಕೂದಲೂ ಉಡುಪೂ ಬೆಂಕಿಯಂತೆ ಝಗಝಗಿಸುತಿತ್ತು!

ಸಾವಿತ್ರಿಯು ಹಡಗಿನೆಡೆಗೆ ಬಂದು, ಮೊಗಮುಚ್ಚಿಕೊಂಡಿದ್ದ ಮಾಧವಿಯನ್ನು ಕಂಡು —'ಪಾಪಿಣೀ! ನಿನ್ನ ಕಾಳುಗೆಯ್ಮೆಯು ಇನ್ನೂ ಕಡೆಗಾಣದೆ? ಇಲ್ಲಿಗೇತಕ್ಕೆ ಬಂದೆ? ನಮ್ಮ ತಾತನು ಎಲ್ಲಿರುವನು? ವಾಸವನ ಗತಿಯೇನಾಯಿತು? ಎಂದೂ ಕಂಡರಿಯದ ಈ ಜನರನ್ನು ಹೊಂದಿಕೊಂಡು ಬಾಳಬೇಕೆಂದಿರುವೆಯಲ್ಲವೆ? ನಿನ್ನ ಎಣಿಕೆಯು ಹೇಗೆ ಕೈಗೂಡುವುದೊ ನಾನರಿಯೆ! ಇರಲಿ. ಈಗಳಿಲ್ಲಿಗೆ ನಿಮಗೆ ಅನ್ನವನ್ನೂ ಪಾನವನ್ನೂ ಕಳುಹಿಕೊಡುತ್ತೇನೆ. ಹಡಗು ಬೇಗನೆ ಇಲ್ಲಿಂದ ಸಾಗಲಿ. ಹೊಲಸೂ ಹೊಲಸಿಗಳೂ ನಮ್ಮಲ್ಲಿಗೆ ಬೇಡ!'— ಎಂದು ತಿರಸ್ಕರಿಸಿದಳು.

ವೀರರು—'ಅಮ್ಮಾ! ಸಾವಿತ್ರಿ! ಉದ್ಧರಿಸು! ನಮ್ಮ ಹೊಲೆಯನ್ನು ಹೋಗಾಡಿಸು!'—ಎಂದು ಅಂಗಲಾಚಿಕೊಂಡರು. ಆದರೆ ಆಕೆಯು— 'ಇಲ್ಲ ಇಲ್ಲ. ಬೇಕಿದ್ದರೆ ಮಲಯಾಚಲಕ್ಕೆ ಹೋಗಿ ನಿಮ್ಮ ಕೊಳೆಯನ್ನು ತೊಳೆದುಕೊಳ್ಳಿರಿ!'—ಎಂದು ಗದರಿಸಿ ಹೊರಟು ಹೋದಳು.

ವೀರರು ಉಪಾಯಾಂತರವಿಲ್ಲದೆ, ಅನುಕೂಲವಾದ ಗಾಳಿಯು ದೊರೆತೊಡನೆಯೆ ಅಲ್ಲಿಂದ ಮೂಡಲು ಸಾಗಿದರು. ಹಲವು ಹರದಾರಿ ಹೋದ ಮೇಲೆ ಹೂಗಿಡುಗಳು ತುಂಬಿದ್ದ ನಾಡೊಂದು ಕಾಣಿಸಿತು. ಆದರ ಹತ್ತಿರಕ್ಕೆ

ಬಂದ ಹಾಗೆಲ್ಲ ಇಂಪಾದ ಹಾಡು ಕೇಳಿಸಿತು. ಇದರ ಮರ್ಮವನ್ನರಿತಿದ್ದ ಮಾಧವಿಯು—'ಬಂಧುಗಳಿರಾ! ಜಾಗ್ರತೆ! ಇದು ಯಕ್ಷಿಣಿಯರ ಶಿಲೆ. ಅದರ ಹತ್ತಿರದಿಂದಲೆ ಹಡಗು ಹೋಗಬೇಕು. ಬೇರೆ ಹಾದಿಯಿಲ್ಲ. ಆದರೆ ಆ ಹಾಡಿಗೆ ಕಿವಿಗೊಡುವವರು ಸತ್ತಂತೆಯೆ ಸರಿ!'—ಎಂದು ಎಚ್ಚರಿಸಿದಳು.

ಗೀತಿಕಾಸುತನು—'ಅಷ್ಟೆ ತಾನೆ? ನೋಡೋಣ, ನನ್ನ ಹಾಡಿನಿದಿರಿಗೆ ಅವರದೆಲ್ಲಿ ಬಂದೀತು? ಜನರ ಮಾತು ಹೋಗಲಿ! ಕಲ್ಲುಗಳನ್ನೂ ಮೃಗಗಳನ್ನೂ ಮರಗಳನ್ನೂ ಮರುಳು ಮಾಡಬಲ್ಲೆನಂತೆ! ಈ ಮುದಿಮುಂಕುಗಳು ಎಷ್ಟರ ಮಟ್ಟಿನವು?'—ಎಂದು ಕೊಚ್ಚಿಕೊಂಡು, ವೀಣೆಯನ್ನು ಮಿಡಿಯುತ್ತ ಮಾಯಾಮಂತ್ರಕ್ಕೆ ಪ್ರಾರಂಭಿಸಿದನು.

ಹಡಗು ಕೊಂಚ ಮುಂದು ಹೋಯಿತು. ಮೂವರು ಯಕ್ಷಿಣಿಯರು ಮರಳ ದಿಣ್ಣೆಯ ಮೇಲೆ ಕುಳಿತುಕೊಂಡು ನಿಧಾನವಾಗಿ ಹಾಡುತ್ತಿದ್ದರು. ಇಂಪಾಗಿಯೂ ಶುದ್ಧವಾಗಿಯೂ ಹಾಡುವ ಅವರ ದನಿಯು ನೀರ ಮೇಲೆ ಸರ್ರನೆ ಸುಳಿಯುತ್ತ ಬಂದು, ವೀರರ ಎದೆಗೆ ನಾಟಿತು.

ಎಲ್ಲವೂ ತಟಸ್ಥವಾಗಿತ್ತು. ಕಡಲ ಕಾಗೆಗಳು ಬಂಡೆಯ ಮೇಲೆ ಸಾಲುಗಟ್ಟಿ ಕುಳಿತುಕೊಂಡು ಕಿವಿಗೊಡುತಲಿದ್ದುವು. ತಿಮಿಂಗಿಲೂ ಮೀನುಗಳೂ ಹಿಂಡುಗಟ್ಟಿ ನಿಂತಿದ್ದುವು. ಗಾಳಿಕೂಡ ಅಳುಕಿದಂತೆ ಮಂದವಾಗಿ ಬೀಸುತಿತ್ತು. ಮುಗಿಲುಗಳು ಆಗಸದಲ್ಲಿ ಕದಲದೆ ನಿಂತಿದ್ದುವು.

ಇತ್ತ ಹಡಗಿನೊಳಗಿದ್ದ ವೀರರು ಈ ಗಾನದ ಇಂಪಿಗೆ ಸೋತು ಬೆರೆತಂತಾದರು. ಅರಿತ್ರಗಳು ಜಾರಿಹೋದವು. ತಲೆಗಳು ಬಾಗಿ ಹೋದವು. ರೆಪ್ಪೆಗಳು ಮುದುಡಿಕೊಂಡವು. ಮನಸ್ಸಿನೊಳಗೆ ಹೊಂಬಿಸಿಲೂ ಹೂದೋಟಗಳೂ ಹೊಳೆಯ ತೊಡಗಿದವು. ತೂಕಡಿಕೆ ತಲೆದೋರಿತು. ತಾವು ಈ ಪರಿ ತೊಳಲಿ ಬಳಲುವುದು ಮರುಳುತನವೆಂದು ಹೊಳೆಯಿತು. ಹೆಸರಿನ ಆಸೆಯೆ ಅಳಿದು ಹೋಯಿತು!

ಅವರೊಳಗೊಬ್ಬನು ತಟ್ಟನೆ ತಲೆಯೆತ್ತಿ—'ತೊಳಲುತ್ತಿರುವುದರಿಂದಾಗುವುದೇನು? ಇಲ್ಲಿಯೆ ನೆಲಸಿ ಕೊಂಚ ದಣಿವಾರಿಸಿಕೊಡರಾಗದೆ?' ಎಂದನು. ಇನ್ನೊಬ್ಬನು—'ದಡಿಗೆ ಹೋಗಿ ಹಾಡಿನ ಜೋಡಣೆಯನ್ನು ಕೇಳೋಣ!'—ಎಂದನು. ಮೂರನೆಯಾತನು—'ಜೋಡಣೆ ಗೀಪಣೆಯೊಂದೂ ಬೇಡ.

ಕೇವಲ ರಾಗವೆ ಸಾಕು. ಜೋಗುಳು ಹಾಡಲಿ. ನಾನು ಕೊಂಚ ಒರಗುವೆ ನಂತೆ! ಬಳಲಿಕೆ ತೊಲಗುವುದು!'—ಎಂದನು. ಸುಂದರಸೇನನು ತಾಳ ಲಾರದೆ—'ರಮಣಿಯರಿರಾ! ಬಂದೆ ಬಂದೆ! ಅಳಿದರೂ ಉಳಿದರೂ ಹಾಡಿ ನೊಂದು ಕೊರತೆ ಬಾರದು!'—ಎಂದು ಹೇಳುತ್ತ ಕಡಲಿಗೆ ಧುಮುಕಿ ಈಜಿ ಕೊಂಡು ಹೋದನು.

ಇಂತಹ ಅವದಸೆಯನ್ನು ಕಂಡು ಮಾಧವಿಯು—'ಗೀತಾಧರ! ಸ್ವರ ವನ್ನೇರಿಸು! ಬಿರುಸಾಗುತ್ತ ಬರಲಿ! ಈ ಮೂಕರ ತೂಕಡಿಕೆಯು ತೊಲಗಲಿ! ಇಲ್ಲದಿದ್ದರೆ ಇವರೆಂದೂ ಯವನಕ್ಕೆ ಹೋಗರು!'—ಎಂದು ಉಪದೇಶಿಸಿದಳು.

ಆ ಪಂಡಿತನು ಅಂತೆಯೆ ಮಾಡಿದನು. ಸ್ವರವು ಕೊಂಬಿನಂತೆ ಹೊರ ಟಿತು. ಗುಡುಗಿನಂತೆ ಆಗಸಕ್ಕೆ ನೆಗೆಯಿತು. ಅದರ ಅಬ್ಬರಕ್ಕೆ ಕಲ್ಲು ಒಲೆಯಿತು; ಕಡಲು ಕರೆಯಿತು! ಯವನರ ಚಿತ್ತವು ಚಿಗುರಿತು! ಈ ಅನುವಿಗೆ ಯಶೋಧರನ ಕಥೆಯನ್ನೆತ್ತಿ ಹಾಡಿದನು. ಆ ವೀರನಿಗೆ ದೇವತೆಗಳ ನೆರವು ಹೇಗೆ ದೊರೆಯಿತು, ನೆಲವನ್ನೂ ಜಲವನ್ನೂ ಹೇಗೆ ಹಾದು ಹೋದನು, ಚೆಲು ವೆಯೂ ಹೊಲಸಿಯೂ ಆಗಿದ್ದ ರಕ್ತೇಶ್ವರಿಯನ್ನು ಹೇಗೆ ಕೊಂದನು, ಕುಂದಿಲ್ಲದ ಇಂದ್ರಾಯಣಿಯು ಹೇಗೆ ದೊರೆತಳು, ದೇವಗಿರಿಯಲ್ಲಿ ದೇವತೆಗಳ ಹಂತಿ ಹೇಗೆ ದೊರೆಯಿತ್ತು, ತಾರಕೀದೇಹಿಯಾಗಿ ಹೇಗೆ ಬೆಳಗುವನು, ಜನರು ಹೇಗೆ ಮಾನಕೊಡುವರು—ಇವೇ ಮುಂತಾಗಿ ಹಾಡಿ ವೀರರಸವನ್ನು ಸುರಿದನು.

ಅತ್ತ ಯಕ್ಷಿಣಿಯರ ಹಾಡು ಗೀತಾಧರನ ಹಾಡಿಗೆ ಸರಿಬಾರದೆ ಎಲ್ಲಿಯೊ ಅಡಗಿ ಹೋಯಿತು. ವೀರರು ಹುರುಪುಗೊಂಡು ಅರಿತ್ರಗಳಿಗೆ ಕೈಗೊಟ್ಟರು. ಹಡಗು ಹಕ್ಕಿಯಂತೆ ಹಾರಿಕೊಂಡು ಹೋಯಿತು. ಗಾಯಕಿಯರು ಎಲ್ಲಿಯೊ ಹಿಂದುಳಿದರು. ಅವರೊಂದಿಗೆ ಸುಂದರಸೇನನು ಕೂಡ ಉಳಿದು ಕೊಂಡನು. ಆ ಚೆನ್ನಿಗನು ತೀರಕ್ಕೆ ಸೇರುತ್ತಲೆ—'ಹಾಡಿರಿ ಹಾಡಿರಿ! ಸೊಗಸಾಗಿ ಹಾಡಿರಿ!'—ಎಂದು ಒದರಿದನು. ಆ ಮೇಲೆ ಮಾತು ಹೊರಪದು. ಮನಸ್ಸಿನೊಳಗೆ ಮಬ್ಬು ಮುಸುಕಿತು. ಕಿವಿಯೊಳಗೆ ಒಂದು ಬಗೆಯ ದನಿ ಕವಿಯಿತು. ತಟ್ಟನೆ ಹರಳ ಮೇಲೆ ಉರುಳಿ ಕೊಂಡನು. ಅರಿವು ಅಳಿದು ಹೋಯಿತು. ಆಗಸವೆಲ್ಲಿಯೊ ನೆಲವೆಲ್ಲಿಯೊ

ಎಂಬಂತಾಯಿತು. ಸುತ್ತುಮುತ್ತಿನ ಮರಳೂ ಕಾಣಿಸದು, ನರರ ಎಲುಬು ಗಳೂ ಕಾಣಿಸವು!

ಅಷ್ಟರಲ್ಲಿ ಆ ಮೂವರು ರಕ್ಕಸಿಯರು ಮೆಲ್ಲನೆ ಎದ್ದು, ಚಿರತೆಗ ಳಂತೆ ಹರಿದುಕೊಂಡು ಬಂದರು. ಇನ್ನು ಗಿಡುಗನವಂತಿರುವ ತಮ್ಮ ಉಗುರುಗಳಿಂದ ಬಗಿದು ತಿನ್ನಬೇಕೆಂದಿದ್ದರು. ಆದರೆ ಅಚ್ಚರಸಿಯೊಬ್ಬಳು ಈತನ ಚೆಲುವನ್ನೂ ಹರೆಯುವನ್ನೂ ಕಂದು ಮನಕರಗಿ, ಕಳಚಿಕೊಂಡ ತಾರಕಿಯಂತೆ ಕೆಳಕ್ಕಿಳಿದು ಬಂದು, ಆ ಕಳೇಬರವನ್ನೆತ್ತಿ ಮಂಜುಮುಸುಕಿನಲ್ಲಿ ಮುಚ್ಚಿಕೊಂಡು ಹಿಂದಕ್ಕೆ ಹಾರಿ ಬಿಟ್ಟಳು.

ಇದನ್ನು ಕಂಡು ಯಕ್ಷಿಣಿಯರು, ತಮಗೆ ತುತ್ತು ಕೈಗೆ ಬಂದರೂ ಬಾಯಿಗೆ ಬರಲಿಲ್ಲವೆಂದು ಬಗೆದು, ಕಿಚ್ಚು ಕೆದರಿ ಕಡಲಿಗಿಳಿದು, ಕಲ್ಲಾಗಿ ಇಂದಿಗೂ ಬಿದ್ದಿರುವರಂತೆ!

---

## XI

ಆ ಮೇಲೆ ಯುವನರು ಅಲ್ಲಿಂದ ಮುಂದಕ್ಕೆ ಸಾಗಿದರು. ಅಗ್ನಿಗರ್ಭ ನೆಂಬ ದಾನವನ ವಸತಿಯು ಕಾಣಿಸಿತು. ಆ ದಾನವನು ಬಸಿರೊಳಗಿನ ಕಿಚ್ಚನ್ನು ತಾಳಲಾರದೆ ಹಗಲಿರುಳು ನರಳುತ್ತ ಅಲ್ಲಿ ಬಿದ್ದುಕೊಂಡಿರುವನಂತೆ! ಆತನು ಅತ್ತಿತ್ತ ಉರುಳಿದನೆಂದರೆ ನೆಲವೆ ನಡುಗುವುದಂತೆ! ಉಸಿರಲ್ಲಿ ಬೆಂಕಿ ಯು ಕಾರಿಕೊಂಡು ಬರುತಿತ್ತು. ಕಡಲಲ್ಲಿ ಬೆಟ್ಟದಷ್ಟು ಎತ್ತರ ಅಲೆಗಳು ಏಳುತಿದ್ದುವು. ಇಂತಹ ಸಂದಿನಲ್ಲಿ ತಾರಿಣಿಯು ಸುಳಿಗೆ ಸಿಲುಕಿಕೊಂಡಿತು. ಸುತ್ತುಸುತ್ತು ತಿರುಗತೊಡಗಿತು. ವೀರರು ಎಷ್ಟು ಪೇಚಾಡಿದರೂ ಆ ಸುಳಿ ಯಿಂದ ಸರಿದುಕೊಳ್ಳಲು ಸಾಗಲಿಲ್ಲ.

ಅಷ್ಟರಲ್ಲಿ ಮತ್ತೊಂದು ಕಡೆಯಲ್ಲಿ ಎತ್ತರವಾದ ಬಂಡೆಯೊಂದು ಕಾಣಿ ಸಿತು. ಬಲು ನುಣುಪು! ಹೆತ್ತಿಪ್ಪತ್ತು ಕೈಕಾಲುಗಳಿದ್ದರೂ ಹತ್ತಿ ಹೋಗಲು ಸಾಗದು! ಇಂತಹ ಬಂಡೆಯು ನಡುವಿನಲ್ಲೊಂದು ಗವಿಯು ಕಾಣಿಸಿತು.

ಇದನ್ನು ಕಂಡೊಡನೆ ಗೀತಾಧರನು ಹತಾಶನಾದನು. 'ಗೆಳೆಯರಿರಾ! ಸಂಕಟಗಳು ಒಂದರ ಮೇಲೊಂದು ಬರುತ್ತಿವೆ. ಈ ಸುಳಿಯಿಂದ ನಾವು

ಪಾರಗಂಡರೂ ಮುಂದಿರುವ ಆ ಗಂಡದಿಂದ ತಪ್ಪಿಸಿಕೊಂಡು ಹೋಗಲಾರೆವು. ಅಲ್ಲಿ ಕಾಣುವ ಗವಿಯೊಳಗೆ ಜಾಲಿನಿ ಎಂಬ ರಕ್ಕಸಿಯಿರುವಳು. ನಮ್ಮ ತಾಯಿ ಗೀತಿಕೆಯು ಈ ರಕ್ಕಸಿಯ ವಿಚಾರವಾಗಿ ಹೇಳಿದ್ದಳು. ಈಕೆಗೆ ಆರು ತಲೆಗಳಿವೆ! ಉದ್ದವಾದ ಆರು ಕತ್ತುಗಳೂ ಇವೆ! ಯಾವಾಗಲೂ ಆ ಗವಿಯೊಳಗೆ ಮರೆಸಿಕೊಂಡಿದ್ದು, ಹತ್ತಿರ ಹಾದು ಹೋಗುವ ಯಾವ ಪದಾರ್ಥವನ್ನಾದರೂ ಹಿಡಿದುಕೊಂಡು ಬಿಡುವಳು. ಮೀನುಗಳಂತೂ ಸಾವಿರಗಟ್ಟಲೆ ಆಕೆಗೆ ತುತ್ತಾಗುವವು. ಹಡಗು ಬಂತೆಂದರೆ ತನ್ನ ನಿಡಿದಾದ ಕೊರಳುಗಳನ್ನು ನೀಡಿ ಒಂದೊಂದು ಬಾಯೊಳಗೆ ಒಬ್ಬೊಬ್ಬನಂತೆ ಎತ್ತಿಕೊಂಡು ನುಂಗಿ ಬಿಡುವಳಂತೆ! ಈಗ—ಮಿತ್ರರಿರಾ! ನಾನಂತೂ ತಾರಾದೇವಿಗೂ ದೇವಾಧಿದೇವನಿಗೂ ಬೇಡವಾದವರು! ಹಡಗಂತೂ ಹೊಲೆಯಾಗಿರುವುದು! ಆದುದರಿಂದ ನಮ್ಮ ಬಾಳುವೆ ಇಲ್ಲಿಗೆ ತೀರಿದಂತೆಯೆ ಸರಿ!' ಎಂದು ನಿರಾಶೆ ತೋರಿದನು.

ಅಷ್ಟರಲ್ಲಿ ಅಪರಾಜಿತನ ಮಡದಿಯಾದ ಸಾಗರಿಕೆಯು, ತನ್ನ ಎರೆಯನ ಮೇಲಣ ಪ್ರೇಮಕ್ಕಾಗಿ ಅಚ್ಚರಸಿಯರನ್ನು ಕೂಡಿಕೊಂಡು ಅಲ್ಲಿಗೆ ಬಂದಳು. ಕೆಳದಿಯರೂ ಒಡತಿಯೂ ಬಲು ಸೋಜಿಗವಾಗಿ ಅಲೆಯಿಂದಲೆಗೆ ಹಾರುತ್ತ ಆಡ ತೊಡಗಿದರು. ಆಡುತ್ತಾಡುತ್ತ ತಾರಿಣಿಯನ್ನು ಕೈಯಿಂದ ಕೈಗೆ ಕೊಟ್ಟುಕೊಂಡು, ಸುಳಿಯ ಬಾಯಿಂದ ತಪ್ಪಿಸಿಕೊಂಡು ಒಯ್ದರು. ಜಾಲಿನಿಯು ಆ ಹಡಗನ್ನು ಹಿಡಿಯ ಬಂದಳು. ಅಚ್ಚರಸಿಯರು ತಟ್ಟನೆ ಆಕೆಗೆರಡು ಏಟುಗಳನ್ನು ಕಾಸಿದರು. ಜಾಲಿನಿಯು ಗತಿಯನ್ನೇನೆಂದು ಹೇಳಲಿ? ಹೊತ್ತಿನಿದಿರಿಗೆ ಕತ್ತಲು ಮರೆಯಾಗುವಂತೆ, ಸತ್ಯಕ್ಕೆ ಸುಳ್ಳು ಬೆದರುವಂತೆ, ಹೊಳೆಪಿಗೆ ಹೊಲೆಯು ಅಂಜುವಂತೆ—ಈ ಕೋಮಲೆಯರ ಕೈಸೋಂಕಿಗೆ ಅಂಜಿ, ಆಕೆಯು ಗವಿಯೊಳಕ್ಕೆ ಅಡಗಿಕೊಂಡು ಬಿಟ್ಟಳು! ಅಲ್ಲಿಂದ ತಾರಿಣಿಯ ಗಂಡವು ಸರಿದಂತಾಯಿತು. ಸಾಗರಿಕೆಯು ಕೆಳದಿಯರೊಂದಿಗೆ ತನ್ನ ಹವಳದ ಮನೆಗೆ ಇಳಿದು ಹೋದಳು. ವೀರರು ಸಂತಸಗೊಂಡು ಮುಂದೆ ಸಾಗಿದರು.

ಆ ಮೇಲೆ ಹಲವು ದಿನಗಳ ತನಕ ಒಂದೇ ಸವನೆ ಹೋಗುತಿದ್ದರು ಕೊನೆಗೊಂದು ಉನ್ನತವಾದ ದ್ವೀಪವೂ ಹಿಂದುಗಡೆ ಗಿರಿಗಳೂ ಕಾಣಿಸಿದುವು. ತೀರದಲ್ಲೊಂದು ದೊಡ್ಡ ನಗರವು ಕಾಣಿಸಿತು. ದೇವಾಲಯಗಳೇನು!

ರಾಜಾಲಯಗಳೇನು? ಕೋಟೆಗಳೇನು? ಕೊತ್ತಳಗಳೇನು? ಬಲು ಸಂಪತ್ತಿನ ಸೊಬಗು! ಕಡಲ ತಡಿಯಲ್ಲಿ ಹಲವು ಹಡಗುಗಳೂ ನಿಂತಿದ್ದವು.

ಧೀಮಂತನಾದ ಕರ್ಣಧಾರಿಯು ಇದನ್ನು ಕಂಡು—'ಇದೊಂದು ಸೋಜಿಗವೆ ಸರಿ. ಇಲ್ಲಿನ ದ್ವೀಪಗಳೆಲ್ಲವೂ ನಾನು ಕಂಡರಿಯುದವಿಲ್ಲ. ಕಡಲ ಸಂದುಗೊಂದುಗಳು ಕೂಡ ನನಗೆ ಗೊತ್ತು. ಇದು ಕುರುಬರ ನಾಡಾಗಿರ ಬೇಕು. ಆದರೆ ಇಂತಹ ನವೀನ ನಗರವು ಇಲ್ಲಿಗೆಲ್ಲಿಂದ ಬಂತು?'—ಎಂದು ಅಚ್ಚರಿಗೊಂಡನು.

ಸುಧಾಕರನು—'ಇಂತಹ ನಗರದಲ್ಲಿರುವವರು ಬರ್ಬರರೆಂದೂ ಆಗಿರ ಲಾರರು. ಹೇಗಿದ್ದರೂ ನಾವಿಲ್ಲಿ ಇಳಿದು ಕಂಡು ಬಿಡೋಣ!'—ಎಂದು ಹೇಳಿದನು.

ಆದರಂತೆಯೆ ಹಡಗನ್ನು ತಡಿಗೊಯ್ದರು. ನೂರಾರು ಹಡಗುಗಳು ನಿಂತಿದ್ದುವು. ಕೆಲವು ತಾರಿಣಿಗಿಂತಲೂ ದೊಡ್ಡವು. ಕರೆಯಲ್ಲಿ ಜನಸಂದ ಣಿಯು ಮಂದವಾಗಿತ್ತು. ವರ್ತಕರೂ ನಾವಿಕರೂ ಆಳುಗಳೂ ಅತ್ತಿಂದಿತ್ತ ಹೋಗಿ ಬರುತಿದ್ದರು. ಇದನ್ನು ಕಂಡು ಯವನ ವೀರರು ಬೆರಗಾಗಿ—'ಇಳಾವರ್ತದಿಂದ ಹೊರಟಾಗ ನಾವಿಕರೆಂದರೆ ನಾವೇ ನಾವೆಂದು ಎಣಿಸಿದ್ದೆವು. ಆದರೆ ಇಲ್ಲಿ ಮಾತ್ರ ನಾವು ಜೇನು ತಟ್ಟೆಯು ಇದಿರಲ್ಲಿನ ಇರುವಿನಂತೆಯೆ ಸರಿ!' ಎಂದಾಡಿಕೊಳ್ಳುತ್ತ, ಆ ನಾಡಿನ ಸೊಬಗನ್ನೂ, ನಾಡಿಗರ ಚಟುವಟಿಕೆಯನ್ನೂ ಕಂಡು ಮೂಕರಂತೆ ನಿಂತು ಬಿಟ್ಟಿದ್ದರು.

ಅಲ್ಲಿನ ಜನರು ಇವರನ್ನು ಕಂಡು—'ಯಾರಯ್ಯಾ ನೀವು? ಎಲ್ಲಿಂದ ಬಂದಿರಿ? ನಮಗಿಲ್ಲಿ ಹೊಸಬರೂ ಬೇಡ; ಕಡಲ ಕಳ್ಳರೂ ಬೇಡ! ನಾವು ಪರರ ಹಂಬಲನ್ನು ಕಟ್ಟಿಕೊಳ್ಳುವರಲ್ಲ. ನಮ್ಮ ಕೆಲಸವು ನಮಗಿರಲಿ!'—ಎಂದು ಗರ್ಜಿಸಿದರು.

ಸುಧಾಕರನು ಸವಿಮಾತುಗಳಿಂದ ಅವರ ನಾಡನ್ನೂ ನಾವೆಗಳನ್ನೂ ಕೊಂಡಾಡಿ—'ನೀವುಗಳು ಪ್ರತ್ಯಕ್ಷ ವರುಣನ ಸಂತತಿಯವರೇ ಸರಿ! ಕಡ ಲೊಡೆಯರೆಂದರೆ ನೀವಲ್ಲದೆ ಮತ್ತಾರಿರುವರು? ನಾವೆಲ್ಲಿಯೋ ಬಡ ನಾವಿಕರು. ಹಸಿವಿಂದಲೂ ದಣಿವಿಂದಲೂ ಸೊರಗುತ್ತಿರುವೆವು. ಅನ್ನ ಪಾನಗಳನ್ನು ಕೊಡಿಸಿರಿ. ನಾವು ನಮ್ಮ ನಾಡಿಗೆ ಹೋಗುತ್ತಿರುತ್ತೇವೆ!'—ಎಂದನು.

ಅದಕ್ಕವರು—'ಅಯ್ಯಾ! ನೀವು ಯೋಗ್ಯರಂತೆ ಕಾಣಿಸುತ್ತೀರಿ. ಆದುದರಿಂದ ನಾವೂ ಸರಳತೆಯಿಂದಲೇ ವರ್ತಿಸುತ್ತೇವೆ. ನಾವು ವರುಣನ ವಂಶದವರೇನೊ ನಿಜ. ಕಡಲೊಡೆತನವೂ ನಮಗಿರುವುದು. ಆದರೆ ಬರಿಯ ಬಾಯುಪಚಾರದಿಂದೇನು? ಇಳಿದು ಬನ್ನಿರಿ; ಕೊಂಚ ವಿಶ್ರಾಂತಿ ದೊರೆಯುವಂತೆ ಮಾಡುವೆವಂತೆ!'—ಎಂದು ಆದರದ ಮಾತನ್ನಾಡಿದರು.

ಯುವನರು ಅವರೆಂದಹೆಯೆ ಮಾಡಿದರು. ಇವರ ವೇಷವು ತೀರ ವಿಚಿತ್ರತರವಾಗಿತ್ತು. ಒರಟು ಗಡ್ಡ, ಕರಿಕು ಕೆನ್ನೆ, ಹರಿಕು ತೊಡಿಗೆ, ತುಕ್ಕಿನ ಕತ್ತಿ, ಮಡಿಯದ ಕಾಲು—ಇಂತಹ ನೋಜಿಗವನ್ನು ಕಂಡು ಅಲ್ಲಿನವರಿಗೆ ನಗು, ಬೇಡವೆಂದರೂ, ಬಾರದಿರದು!—'ಇವರು ಕಡಲಿಗೆ ಹೊಸಬರಾಗಿರ ಬಹುದು. ಕಡಲಿನ ಜಡಕ್ಕೆ ಈಡಾಗಿರುವಂತೆ ಕಾಣಿಸುವರು'—ಎಂದು ಒಬ್ಬನು ಹೇಳಿದನು. 'ಹಾಗಲ್ಲ. ಬಲುಗಾಲ ಕಡಲಲ್ಲಿಯೆ ಕಳೆದಿರುವರು. ನಡೆಯನ್ನು ಕಂಡರೆ ಕಾಣುವುದಿಲ್ಲವೆ? ಬಾತುಗಳಂತೆ ತೆವಳಿಕೊಂಡು ನಡೆಯುತ್ತಿರುವರು!'—ಎಂದು ಮತ್ತೊಬ್ಬನು ಹೇಳಿದನು. ಈ ಮಾತುಗಳನ್ನು ಕೇಳಿ ಯುವನರಲ್ಲಿ ಕೆಲವರಿಗೆ ತಡೆಯಲಾರದ ಸಿಟ್ಟು ಬಂತು. ಆದರೆ ನಾಯಕನ ನಿಯಮದಂತೆ ಕೈಬಾಯಿ ಹಿಂದಿರಿಸ ಬೇಕಾಯಿತು. ಈ ಸಂಗತಿಯನ್ನರಿತು ವರ್ತಕರ ಮುಂದಾಳೊಬ್ಬನು—'ಅಯ್ಯಗಳಿರಾ! ಕೊರಚಾಡಿದರೆಂದು ಕೊರಗ ಬೇಡಿರಿ. ಅತಿಥಿಗಳೂ ದರಿದ್ರರೂ ದೇವರಿಂದ ಪ್ರೀತರು. ಆದುದರಿಂದ ಆದರೋಪಚಾರಗಳಿಗೇನೂ ಕೊರತೆಯಾಗದು. ನಿಮ್ಮ ಬಲವನ್ನೂ ನಿಲುವಿಕೆಯನ್ನೂ ಕೈದುಗಳನ್ನೂ ನೋಡಿದರೆ ನೀವು ಕೇವಲ ನಾವಿಕರೆಂದು ಹೇಳಲು ಬಾರದು. ನಮ್ಮ ವರ್ತಕರಾಜನಾದ ವಸುಮಿತ್ರನ ಅರಮನೆಗೆ ನಡೆಯಿರಿ ಬಳಲಿಕೆ ನೀಗಿದ ಮೇಲೆ ನಿಮ್ಮ ಕತೆಯನ್ನು ಕೇಳೋಣವಂತೆ!'—ಎಂದು ಉಪಚರಿಸಿದನು.

ಮಾಧವಿಯಾದರೊ ಮುಂದಕ್ಕೆ ಬಾರದೆ, ಅಳುಕಿನಿಂದ ಸುಧಾಕರನ ಹಿಂದುಗಡೆ ಸರಿದು—'ಹೋಯಿತು. ಸರ್ವನಾಶವಾಯಿತು! ನಮ್ಮ ತಾತನಟ್ಟದ ದೂತರು ಹಲವರು ಇಲ್ಲಿರುವರು. ಅದೊ! ಉಕ್ಕಿನ ತಸುತ್ರದವರೆ ಪ್ರಭಾಮಂಡಲದವರು. ನಾನು ಚೆನ್ನಾಗಿ ಬಲ್ಲೆ. ನಾನಿಂದಿಗೆ ಸೆರೆ ಸಿಲುಕಿದಂತೆಯೆ ಸರಿ!'—ಎಂದು ಬೆದರಿಕೆ ಬೀರಿದಳು.

ಸುಧಾಕರನು—'ಇನ್ನು ಅಡಿ ಹಿಂದಿಡಲು ಬರುವುದಿಲ್ಲ!'—ಎಂದು ಆಕೆಗೆ ಹೇಳಿ ಆ ವರ್ತಕನೊಡನೆ—'ಅಯ್ಯಾ! ಇದು ಯಾವ ನಾಡು? ಈ ನಗರವನ್ನು ಯಾರು ನಿರ್ಮಿಸಿದರು?'—ಎಂದು ಕೇಳಿದಳು.

ಆಗಲವನು—'ವೀರಾ! ಇದು ಯಾದಸರ ನಾಡು. ಏಕಾಕ್ಷವಂಶದ ದಾನವರ ಹಾವಳಿಯನ್ನು ತಾಳಲಾರದೆ ನಾವು ಊರಿಂದೂರಿಗೆ ಅಲೆದಲೆದು ಕೊನೆಗೆ ಇಲ್ಲಿಗೆ ಬಂದು ಈ ನಗರವನ್ನು ಕಟ್ಟಿಕೊಂಡೆವು. ವಸುಮಿತ್ರನು ನಮ್ಮ ದೊರೆಯು; ಪ್ರಜ್ಞಾದೇವಿಯು ಆತನ ರಾಣಿ! ಬಲು ಜಾಣೆ!'—ಎಂದು ಹೇಳಿಕೊಂಡನು.

ಆ ಮೇಲೆ ಅಲ್ಲಿಂದ ಅರಮನೆಯ ಹಾದಿ ಹಿಡಿದರು. ಒಂದೆಡೆ ವರುಣ ದೇವನ ಗುಡಿಯ ಮುಂಗಡೆ, ನಾವಿಕರು ಹಗ್ಗ ಹೊಸೆಯುತ್ತಲೂ ಬಲೆ ಹೆಣೆಯುತ್ತಲೂ ಹಾಯಿ ಹೊಲಿಯುತ್ತಲೂ ಕುಳಿತಿದ್ದರು. ಇನ್ನೊಂದೆಡೆ ಮರಗೆಲಸದವರು ಮರಕೊರೆಯುತ್ತಲೂ ನಾವೆ ನಿರ್ಮಿಸುತ್ತಲೂ ಹಲಗೆ ಕೀಸುತ್ತಲೂ ಕೆಲಸದಲ್ಲಿಯೆ ಮುಳುಗಿದ್ದರು. ಈ ಸೊಬಗನ್ನು ನೋಡುತ್ತ ಯುವನರು ಉಸಿರಿಲ್ಲದೆ ಕೇರಿಯಿಂದ ಕೇರಿಗೆ ನಡೆದು ಕೊನೆಗೆ ಅರಮನೆಗೆ ಬಂದು ಸೇರಿದರು. ಅಲ್ಲಿನ ಸಿರಿಯನ್ನೇನೆಂದು ಹೇಳುವುದು? ಉನ್ನತ ಗೋಪುರಗಳು, ಹಿತ್ತಾಳಿ ಕೆತ್ತಿದ ಗೋಡೆಗಳು, ಹೊನ್ನಿನ ಕಿಟಕಿಗಳು, ಬೆಳ್ಳಿಯ ಬಾಗಿಲುಗಳು! ಹೆಬ್ಬಾಗಲ ಬಳಿ ಹೊನ್ನೆರಕದ ಕಾವಲ ನಾಯಿಗಳು! ಎಲ್ಲವೂ ಬಿಸಿಲಿಗೆ ತೊಳಗುತಿದ್ದವು! ಒಳಗಡೆ ಇಬ್ಬದಿಗಳಲ್ಲಿಯೂ ಸಾಲಾಗಿ ಆಸನಗಳನ್ನಿರಿಸಿದ್ದರು. ಬಂಗಾರದ ಗೊಂಬೆಗಳ ಕೈಲಿ ದೀಪಗಳನ್ನು ಕೊಟ್ಟು ಅಲ್ಲಲ್ಲಿ ನಿಲಿಸಿದ್ದರು.

ಇನ್ನು ಇಂತಹ ಅರಮನೆಯ ಸುತ್ತಲೂ ತಂಪಿನಲ್ಲಿ ಹಲವರು ದಾಸಿಯರು ದುಡಿಯುತ್ತಲಿದ್ದರು. ಹಿಟ್ಟು ಬೀಸುವುದೂ ಬಟ್ಟೆ ನೇಯುವುದೂ ಅವರ ಕೆಲಸ. ಮುಂಗಡೆಯಲ್ಲೊಂದು ಹೂದೋಟ. ಅದರಲ್ಲಿ ಮೊಗ್ಗುಗಳಿಗೂ ಅರಳುಗಳಿಗೂ ಎಂದೂ ಕೊರತೆ ಬಾರದು. ಅಂಚಿನಲ್ಲಿ ಸುತ್ತಲೂ ದಾಳಿಂಬ, ಅಂಜೂರ, ದ್ರಾಕ್ಷೆ ಮುಂತಾದ ಹಣ್ಣಿನ ಗಿಡಗಳು ಬಾಗಿಕೊಂಡಿದ್ದವು. ಈ ಮಧ್ಯೆ ಎರಡು ಕಾರಂಜಿಗಳು ಸದಾಕಾಲವೂ ನೀರು ಕಾರುತ್ತಲಿದ್ದವು. ದೇವರು ಸಕಲ ಸಂಪತ್ತನ್ನೂ ವಸುಮಿತ್ರನಿಗೆ ಕರುಣಿಸಿದ್ದಂತೆ ಕಾಣಿಸುತಿತ್ತು!

ವಸುಮಿತ್ರನು ವರುಣದೇವನಂತೆ ಗದ್ದುಗೆಯಲ್ಲಿ ಕುಳಿತುಕೊಂಡು ವರ್ತಕಮಂಡಲಿಯ ವರ್ತಮಾನಗಳನ್ನು ವಿಚಾರಿಸುತಲಿದ್ದನು. ಹೊನ್ನಿನ ರಾಜದಂಡವೂ ಹೊಂಜರಿಗೆಯ ಉಡುಪು ತೊಡುಪುಗಳೂ ಮಿರುಗುತ್ತಲಿದ್ದುವು. ಬಳಿಯಲ್ಲಿ ಚೆಲುವೆಯೂ ಜಾಣೆಯೂ ಆಗಿದ್ದ ಪ್ರಜ್ಞಾದೇವಿಯು ನಿಂತಿದ್ದಳು.

ಯುವನ ವೀರರನ್ನು ಕಾಣುತ್ತಲೆ ವಸುಮಿತ್ರನು ಎದ್ದು ಬಂದು, ಅವರನ್ನು ಕೈಗೊಟ್ಟು ಕರೆದುಕೊಂಡು ಹೋಗಿ ಬಳಿಯಲ್ಲಿ ಕುಳ್ಳಿರಿಸಿಕೊಂಡು ಬಗೆ ಬಗೆಯ ತಿಂಡಿಗಳನ್ನೂ ಪಾನಗಳನ್ನೂ ತಂದಿರಿಸಿ ಉಪಚರಿಸಿದನು. ಮಾಧವಿಯು ಮಾತ್ರ ಅಂಜುತಂಜುತ್ತ ರಾಣಿಯ ಬಳಿಗೆ ನಡೆದು ಕಾಲಿಗೆರಗಿ 'ತಾಯಿ! ಮರೆಹೊಕ್ಕಿರುವೆನು; ಮಡಿಲಲ್ಲಿ ಹಾಕಿಕೊ! ನಮ್ಮ ತಂದೆಯ ಬಳಿಗೆ ನನ್ನನ್ನು ಕಳುಹಿಕೊಡ ಬೇಡ; ಸಾವಿನ ಬಾಯಿಗೆ ಒಡ್ಡ ಬೇಡ! ನನ್ನ ಭಾರ ನನಗಿರಲಿ! ನನ್ನ ಹಾದಿಗೆ ಅಡ್ಡ ಬರ ಬೇಡ! ನನಗಾಗಲೆ ಸಾಕಷ್ಟು ಶಿಕ್ಷೆಯೂ ಅವಮಾನವೂ ದೊರೆತಿರುವುದು!'—ಎಂದು ಅಂಗಲಾಚಿಕೊಂಡಳು.

ಆಗ ರಾಣಿಯು—'ಯಾರಮ್ಮಾ ನೀನು? ಈ ನಿನ್ನ ಕೇಳಿಕೆಯ ಅರ್ಥವೇನು? ಬಿಚ್ಚಿ ಹೇಳಬಾರದೆ?'—ಎಂದು ಕೇಳಿದಳು.

ಮಾಧವಿಯು—'ಅಮ್ಮಾ! ನಾನು ಮಿತ್ರಾವಸುವಿನ ಮಗಳು; ಮಂದಭಾಗ್ಯೆಯಾದ ಮಾಧವಿಯು! ನನ್ನ ತವರೂರವರು ಇಲ್ಲಿ ನುಳಿಯುತ್ತಿರುವರು. ನನ್ನನ್ನು ಹಿಡಿದು ಕೊಂಡು ಹೋಗಲು ಬಂದಿರಬೇಕು'—ಎಂದಳು.

ಈ ಮಾತನ್ನು ಕೇಳಿ ರಾಣಿಯು ಹುಬ್ಬು ಗಂಟಿಕ್ಕಿ, ದಾಸಿಯನ್ನು ಕರೆದು—'ಈಕೆಯು ಒಳಗೆ ಹೋಗಲಿ. ಅರಸರೇ ಈಕೆಯ ಸುದ್ದಿಯನ್ನು ಸರಿಗೊಳಿಸಲಿ!'—ಎಂದಳು.

ವಸುಮಿತ್ರನು ತಟ್ಟನೆ ಚಿಗಿದು—'ಯಾರಯ್ಯಾ ನೀವು? ಎಲ್ಲಿಂದ ಬಂದಿರಿ? ಈ ಕನ್ನಿಕೆ ಯಾರು?'—ಎಂದು ಕೇಳಿದನು.

ಸುಧಾಕರನು—'ರಾಜನೆ! ನಾವು ಯುವನರು. ಈಕೆಯ ಮಾತುಗಳು ಸಟೆಯಲ್ಲ. ಹೊಂದೊವಲನ್ನು ತಂದವರು ನಾವೇ! ಊರೂರು ಹರಡಿರುವ ಹೆಸರು ನಮ್ಮದೇ! ಯಾರೂ ಕಾಣದ ಸಂಕಟಗಳನ್ನು ಕಂಡುಕೊಂಡು, ನಾವೀಗ ಕಡಲಿಂದಿಲ್ಲಿಗೆ ಬಂದಿರುವೆವು. ಹೊರಟಾಗ ಹಲವರಿದ್ದೆವು. ಈಗ

ಮಾತ್ರ ಕೆಲವರೇ ಉಳಿದಿರುವೆವು. ಅತಿಥಿಗಳನ್ನು ಆತಂಕವಿಲ್ಲದೆ ಹೋಗಲೀ ಯುವುದು ಧರ್ಮವಷ್ಟೆ? ನಮ್ಮನ್ನು ಕೂಡ ನಿರಾತಂಕವಾಗಿ ಕಳುಹಿ ಕೊಡೋಣಾಗಲಿ! ವಸುಮಿತ್ರನು ವಿವೇಕಿಯೆಂದು ಎಲ್ಲರೂ ಕೊಂಡಾಡಲಿ!' ಎಂದು ಹೇಳಿದನು.

ವಸುಮಿತ್ರನಿಗೆ ತೊಂದರೆಗಿಟ್ಟಿತು. ಬಲು ಹೊತ್ತು ಯೋಚಿಸಿ, ಕೊನೆಗೆ—'ಏನು ಮಾಡಲಿ? ಆದುದು ಆಗಿ ಹೋಯಿತು. ಇಲ್ಲದಿರುತಿದ್ದರೆ, ಹೆಸರುಗೊಂಡ ಹೊಂದೊವಲ ವೀರರಿಗೆ ಆದರವನ್ನಿತ್ತೆನೆಂದು ವಂಶಾನುಗತ ವಾಗಿ ನಾವು ಹಿಗ್ಗಬಹುದಿತ್ತು. ಆದರೆ ಪ್ರಭಾವಮಂಡಲದವರು ಕೂಡ ಅಭ್ಯಾ ಗತರು. ಹಡಗುಪಡೆ ಕಟ್ಟಿಕೊಂಡು ಇಲ್ಲಿಗೆ ಬಂದು ಒಂದು ತಿಂಗಳಾಗುತ್ತ ಬಂತು. ಎಲ್ಲೆಲ್ಲಿ ಹುಡುಕಿದರೂ ನೀವುಗಳು ಕಾಣಿಸಲಿಲ್ಲವಂತೆ. ಈಗ ಮುಂದೆ ಹೋಗುವುದಕ್ಕೂ ಆರರು, ಹಿಂದೆ ಹೋಗುವುದಕ್ಕೂ ಅಂಜುವರು!' ಎಂದು ನುಡಿದನು.

ಸುಧಾಕರನು—'ಅದಕ್ಕೊಂದು ಉಪಾಯ ಮಾಡೋಣವಂತೆ. ಮುಂ ದಾಳುಗಳನ್ನು ಆರಿಸಲಿ. ಹೆಣಗಿ ಜಯಿಸ ಬಹುದು!'—ಎಂದು ಸೂಚಿಸಿದನು.

ವಸುಮಿತ್ರನು—'ಆಗದಾಗದು! ನಮ್ಮಲ್ಲಿ ಯಾರೂ ಹಾಗೆ ಮಾಡ ಕೂಡದು. ಆದರೆ ನಮ್ಮ ದೇಶದಿಂದ ನೀವು ಹೊರಗೆ ಹೋದಿರೆಂದರೆ, ಹತ್ತು ಗಟ್ಟಲೆಯು ನೀವು ನೂರುಗಟ್ಟಲೆಯು ಅವರಿಗೆ ಈಡಲ್ಲ. ಆದುದರಿಂದ ನಿಮ್ಮೊ ಳಗೆ ನ್ಯಾಯುವನ್ನೆ ಮಾಡೋಣವಂತೆ. ಹೇಗೂ ಇರಲಿ. ನಾಳೆಗೆ ನೋಡಿ ಕೊಳ್ಳೋಣ. ಈ ಹೊತ್ತಿನ ಮಬ್ಬಿಗೆ ಉಂಡುತಿಂದು ಸಂತಸ ಪಡಬೇಕು. ನಿಮ್ಮ ಕತೆಯನ್ನು ಆದ್ಯಂತ ಕೇಳಬೇಕೆಂಬ ಲವಲವಿಕೆಯಿದೆ'—ಎಂದನು.

ಈ ಮಾತಿಗೆ ಎಲ್ಲರೂ ಒಪ್ಪಿದರು. ಅರಸನ ಅಣತಿಯಂತೆ ಆಳುಗಳು ಬಂದು ಯುವಕರನ್ನು ಬಚ್ಚಲ ಮನೆಗೆ ಕರೆದುಕೊಂಡು ಹೋದರು. ಅಲ್ಲಿ ಬಿಸಿನೀರನ್ನು ಕಂಡೊಡನೆಯೆ ಅವರ ಆನಂದವು ಉಕ್ಕಿತು. ಬಲುಗಾಲ ಕಾಣದಿದ್ದ ಬಿಸಿ ನೀರು ಇಂದು ದೊರೆತುದರಿಂದ ಮೈಯ ಉಪ್ಪೆಲ್ಲವನ್ನೂ ತಿಕ್ಕಿ ತೊಳೆದರು. ಎಣ್ಣೆ ಸವರಿಕೊಂಡರು. ತಲೆ ಹಿಕ್ಕಿಕೊಂಡರು. ಮಿಂದು ಮಡಿಯುಟ್ಟು ಬಂದಾಗ ಎಲ್ಲರೂ ಅರಸುಮಕ್ಕಳಂತೆಯೆ ಕಾಣಿಸುತಿದ್ದರು. ವರ್ತಕವೃಂದವು ಇವರ ಅಂದಚೆಂದವನ್ನು ಕಂಡು ಅಚ್ಚರಿಗೊಂಡು, ಎದ್ದು

ನಿಂತು ಮಾಸಗೊಟ್ಟು—'ದೈತ್ಯರಂತೆ ಹೇಗೆ ನಿಂತಿರುವರು? ದೇವಗಿರಿಯಿಂದಿಳಿದು ಬಂದ ದೇವತೆಗಳೆ ಬೇರೆ ಅಲ್ಲವಷ್ಟೆ? ಚಳಿಗಾಳಿಗಳ ಪೆಟ್ಟು ಇಷ್ಟು ತಿಂದರೂ ದಿಟ್ಟರಂತೆಯೆ ಕಾಣಿಸುವರು! ಇಂತಹ ವೀರರು ಎಳವೆಯಲ್ಲಿ ಇಳಾವರ್ತದಿಂದ ಹೊರಟಾಗ, ಅವರ ಮೈಕಟ್ಟು ಹೇಗಿದ್ದಿರಬೇಕು?'—ಎಂದು ಮುಂತಾಗಿ ಆದಿಕೊಳ್ಳುತಿತ್ತು.

ಅಲ್ಲಿಂದೆಲ್ಲರೂ ತೋಟಕ್ಕಿಳಿದರು.—'ವೀರರಿರಾ! ಬನ್ನಿರಿ! ಓಟ ಓಡೋಣ. ಯಾರು ಮುಂದೆ ಬರುವರೊ ನೋಡೋಣ!'— ಎಂದು ವರ್ತಕರು ಕರೆದರು.

ಆಗಲಾ ಯುವನರು —'ನಾವು ಒಲ್ಲೆವು. ಕಪಲ ಜೀವನದಿಂದ ಕೈಕಾಲುಗಳು ಒರಟಾಗಿವೆ. ಅದೂ ಅಲ್ಲದೆ ಓಡಬಲ್ಲ ನಮ್ಮ ವೀರರಿಬ್ಬರು ಅಂದೆ ಅಳಿದಿರುವರು. ಆದರೆ ನಾವೇನೊ ಹೇಡಿಗಳೆಂದೆಣಿಸಬೇಡಿರಿ. ನಮ್ಮ ಕುಶಲತೆಯನ್ನು ಕಾಣಬೇಕೆಂದಿದ್ದರೆ, ಅಂಬೆಸೆಯುವುದರಲ್ಲೊ, ಪೆಣಗುವುದರಲ್ಲೊ ನಮ್ಮನ್ನಿದಿರಿಸಿರಿ!'—ಎಂದು ನುಡಿದರು.

ಆಗ ವಸುಮಿತ್ರನು —'ನಿಜ ನಿಜ! ನೀವು ದಿಟ್ಟರೆ ಆಗಿರಬಹುದು. ನಿಮ್ಮ ಕೈಕಾಲುಗಳನ್ನೂ ಭುಜಗಳನ್ನೂ ಕಂಡರೆ ಗೊತ್ತಾಗುವುದಿಲ್ಲವೇ? ನಿಮ್ಮನ್ನು ಗೆಲುವವರು ನಮ್ಮಲ್ಲಿ ಯಾರೂ ಇರಲಾರರು. ಅಂಬಿನಾಟದಲ್ಲಿಯೂ ಸೆಣಸಾಟದಲ್ಲಿಯೂ ನಮಗೆ ಅಭಿರುಚಿ ಕಡಿಮೆ. ಊಟ ಮಾಡುವುದು, ಆಟ ಆಡುವುದು, ಓಟ ಓಡುವುದು, ಹಾಡು ನುಡಿಸುವುದು—ಇವುಗಳಲ್ಲಿಯೆ ನಮ್ಮ ಜಾಣತನ!'—ಎಂದು ತಮ್ಮವರ ಸಂಗತಿಯನ್ನು ವಿವರಿಸುತ್ತಲೆ, ವರ್ತಕಪತಿಗಳು ಆಟಕ್ಕೂ ಓಟಕ್ಕೂ ತೊಡಗಿ, ಇರುಳು ಕವಿವಲ್ಲಿವರೆಗೂ ವಿನೋದಪಟ್ಟರು. ಆ ಮೇಲೆ ಎಲ್ಲರೂ ಅರಮನೆಗೆ ಹೋಗಿ ಊಟಕ್ಕೆ ಕುಳಿತರು. ದೊರೆಯು ಅರಮನೆಯ ಪಂಡಿತನನ್ನು ಕರೆಯಿಸಿ ವೀಣೆಯನ್ನು ನುಡಿಸ ಹೇಳಿದನು. ಆ ಪಂಡಿತನ ಜಾಣ್ಮೆಯು ಅಷ್ಟಿಷ್ಟಲ್ಲ! ಬಾಯಿಂದ ಹಾಡಿದಂತೆಯೆ ಕೈಯಿಂದ ನುಡಿಯುತಿತ್ತು! ಇದಕ್ಕೆ ಸರಿಯಾಗಿ ನಾಟ್ಯವೂ ನಡೆಯಿತು. ಕೊಂಚ ಹೊತ್ತಿನ ಮೇಲೆ ದೊರೆಯು ಯುವನರೊಡನೆ—'ಅಯ್ಯಾ ಕೇಳಿದಿರೇ ನಮ್ಮ ಸಂಗೀತ? ಕಂಡಿರೇ ನಮ್ಮ ನಾಟ್ಯ? ನೀವುಗಳು ಹಲವು ನಾಡುಗಳನ್ನು ಅಲೆದಿರುವಿರಿ. ಇಂತಹುದನ್ನು ಎಲ್ಲಿಯಾದರೂ

ಕಂಡುದುಂಟೇ? ನಮ್ಮ ಈ ಜಾಣ್ಮೆಗೆ ಸರಿಗೈ ಎಲ್ಲಿಯೂ ಇರಲಾರದು!'—ಎಂದು ಕೊಚ್ಚಿಕೊಂಡನು.

ಗೀತಾಧರನು—'ಅಯ್ಯಾ, ದೊರೆಯೆ! ಇಂತಹ ನಾಟ್ಯವನ್ನೇನೊ ನಾವೆಲ್ಲಿಯೂ ಕಂಡಿಲ್ಲ. ನಿಮ್ಮ ಗಾಯಕನು ಪಂಡಿತನೇ ಸರಿ! ಗಂಧರ್ವರಾಜನಿಂದಲೇ ಆತನು ಕಲಿತು ಕೊಂಡಿರಬೇಕು. ಇಲ್ಲವಾದರೆ ಗಂಧರ್ವನ ಮಗನೇ ಆಗಿರಬೇಕು. ನಾನು ಕೂಡಾ ಗೀತಿಕೆಯೆಂಬ ಹೆಸರಿನ ಗಂಧರ್ವಯ ಮಗನು. ನಾನು ಒಂದೆರಡು ತಡವೆ ಹಾಡಿದುದುಂಟು. ಆದರೆ ಈ ಪಂಡಿತನ ಹಾಡಿಗೆ ಸರಿಬಾರದು!'—ಎಂದು ಮೆಲ್ಲಗೆ ಹೇಳಿದನು.

ಈ ಮಾತನ್ನು ಕೇಳಿ ರಾಜನು—'ಹಾಡು ಹಾಗಾದರೆ! ಉಡುಗೊರೆ ಮಾಡುವೆವಂತೆ!'—ಎಂದು ಉಲ್ಲಾಸದಿಂದ ಹೇಳಿದನು. ಗೀತಾಧರನು ಕೂಡಲೇ ತನ್ನ ವೀಣೆಯನ್ನು ತೆಗೆದುಕೊಂಡು ಬಾರಿಸುತ್ತ ಹಾಡತೊಡಗಿದನು. ತಾವು ಇಳಾವರ್ತದಿಂದ ಹೊರಟುದು, ಗಂಡಗಳಿಂದ ಪಾರಗಂಡುದು, ಹೊಂದೊವಲನ್ನು ಸಂಗ್ರಹಿಸಿ ಕೊಂಡುದು, ಮಾಧವಿಯ ನಿಸ್ಸೀಮ ಪ್ರೇಮ, ಆಕೆಯ ಸಹಾಯ, ಬಿರುಗಾಳಿಯ ಅವಾಂತರ, ಬಂಡೆಗಳ ದಿಂಡತನ—ಇವೇ ವಿಷಯಗಳನ್ನು ವಿಸ್ತರಿಸಿ, ಮನ ಕರಗುವಂತೆ ಹಾಡಿ ತೋರಿದನು. ರಾಣಿಯ ಮನಸ್ಸು ನೀರಾಯಿತು. ಹೆಂಗುಸರು ಕಣ್ಣೀರು ಮಿಡಿದರು. ವರ್ತಕರು ಮೈಮರೆದು ಎದ್ದುನಿಂತು,—'ಯುವನವೀರರಿಗೆ ಜಯವಾಗಲಿ'—ಎಂದು ಕೊಂಡಾಡಿದರು.

ಇಷ್ಟರಲ್ಲಿ ಇರುಳು ಸರಿದು ಬೆಳಕು ಹರಿಯಹತ್ತಿತು. ಎಲ್ಲರೂ ತಂತಮ್ಮ ಎಡೆಗೆ ಸೇರಿಕೊಂಡರು. ಯುವನರೂ ಅಲ್ಲಿಯೆ ಕೊಂಚ ಒರಗಿಕೊಂಡರು; ಪ್ರಜ್ಞಾದೇವಿಯು ಅವರಿಗೆ ಹಾಸುಗೆಗಳನ್ನು ತರಿಸಿಕೊಟ್ಟಳು. ಆದರೆ ಸರಳೆಯಾದ ಆ ರಾಣಿಯು ಮಾತ್ರ ತಾನೂ ಮಲಗಲಿಲ್ಲ, ಗಂಡನನ್ನೂ ಮಲಗಬಿಡಲಿಲ್ಲ! ಮಾಧವಿಯ ಪರವಾಗಿ ಗಂಡನೊಂದಿಗೆ ಬಲುವಾಗಿ ಬೇಡಿಕೊಂಡಳು.—'ಅವಳ ತಪ್ಪಿಗೆ ದೇವರೇ ಶಿಕ್ಷೆ ಕೊಡಲಿ. ನಾವೇಕೆ ಸುಮ್ಮಗಿರಬಾರದು? ಎಷ್ಟೆಂದರೂ ಆಕೆಯು ಮರೆ ಬಂದವಳು. ಕೈ ಬಿಡುವುದು ಸರಿಯಲ್ಲ. ಅದೂ ಅಲ್ಲದೆ ಗಂಡಹೆಂಡಿರನ್ನು ಅಗಲಿಸುವುದು ಎಲ್ಲಿಯ ನ್ಯಾಯ?' ಎಂದು ವಾದಿಸಿದಳು.

ರಾಜನು ಈ ಮಾತುಗಳನ್ನು ಕೇಳಿ—'ಪ್ರಜ್ಞೆ! ಗೀತಕ್ಕೆ ಸೋತಿರುವೆ, ಅಲ್ಲವೆ? ಆದರೆ ಹಾಡುಗಳಿಂದಲೆ ನ್ಯಾಯ ತೀರದು. ಹೆಸರಿಗೆ ಹೊಲಸು ತಟ್ಟದಂತಿರ ಬೇಕು'—ಎಂದು ವಕ್ರವಾಗಿ ನುಡಿದನು. ಆದರೂ ಕೊನೆಗೆ ಪ್ರಜ್ಞೆಯು ಹಲವು ನಯನುಡಿಗಳಿಂದ ಪತಿಯನ್ನು ಕಾಡಿಬೇಡಿ ಒಲಿಸಿಕೊಂಡೇ ಬಿಟ್ಟಳು!

ಬೆಳಗಾಗುತ್ತಲೆ ಓಲಗ ನೆರೆಯಿತು. ದೊರೆಯು ಸಲಹೆ ಕೇಳಲು ತೊಡಗಿದನು.—'ಅಯ್ಯಾ! ಬಂಧುಗಳಿರಾ! ಈಗಿನ ವಿಚಾರವು ತೀರ ಬಿಕ್ಕಟ್ಟಿನದು. ಆದರೆ ಈ ಯುವನರು ನಮಗೆ ಸಮೀಪದಲ್ಲಿಯೆ ವಾಸಿಸುವವರು. ಪ್ರಭಾಮಂಡಲವಾದರೊ ಯಾವ ಮೂಲೆಯೊ ಯಾರು ಬಲ್ಲ? ಆದುದರಿಂದ ಈಗ ನಾವು ಯಾರೊಡನೆ ಹಗೆ ಕಟ್ಟಿಕೊಂಬೋಣ? ಹತ್ತಿರದವರೊಡನೆಯೆ? ದೂರದವರೊಡನೆಯೆ?'—ಎಂದು ಪ್ರಶ್ನೆ ಹಾಕಿದನು.

ರಾಜನ ಇಂಗಿತವರಿತ ಮಂತ್ರಿಮಂಡಲಿಯುವರು ನಗುತ್ತ ಅಣ್ಣನ ಜಾಣ್ಮೆಯನ್ನು ಕೊಂಡಾಡಿದರು. ಕೂಡಲೆ ಎರಡು ಕಡೆಯುವರನ್ನೂ ಕರೆಯಿಸಿ, ಪ್ರಭಾಮಂಡಲದವರೊಡನೆ—'ಅಯ್ಯಾ! ಈ ಮಾಧವಿಯ ವಿಚಾರವಾಗಿ ನಿಮ್ಮ ಹೇಳಿಕೆಯೇನು?'—ಎಂದು ಕೇಳಿದನು.

'ನಾವಾಕೆಯನ್ನು ನಮ್ಮ ರಾಜನ ಬಳಿಗೆ ಕರೆದುಕೊಂಡು ಹೋಗಬೇಕಾಗಿದೆ. ಅಲ್ಲಿ ಅವಳನ್ನು ಬಲಿಗೊಡುವರು. ಆದರೆ ನಾವು ಬರಿಗೈಯಲ್ಲಿ ಹೋದೆವೆಂದರೆ ನಮ್ಮನ್ನೆ ಬಲಿಗೊಟ್ಟಾರು!' ಎಂದು ಅವರು ಹೇಳಿದರು.

ಆಗ ರಾಜನು ಯವನರ ಕಡೆಗೆ ತಿರುಗಿ—'ಯುವನ ವೀರರೇ! ಈ ಮಾತಿಗೆ ನೀವೇನೆನ್ನುವಿರಿ?'—ಎಂದು ಕೇಳಿದನು.

ಸುಧಾಕರನು—'ನಮ್ಮ ಹೇಳಿಕೆ ಇಷ್ಟೆ: ಇವರು ಪ್ರಭಾಮಂಡಲದಿಂದ ಇಲ್ಲಿ ತನಕ ಬಂದುದು ನಿರರ್ಥಕವೆ ಸರಿ. ಸೂರ್ಯಪುತ್ರರಿರಾ! ನಿಮ್ಮ ಈ ಮಾಧವಿಯು ನಿಮ್ಮೊಡನೆ ಬಂದಾಳೆ? ಆಕೆಯು ಬರುವಂತೆ ಮಾಡುವಷ್ಟು ಸಾಹಸ ನಿಮ್ಮಲ್ಲಿರುವುದೆ? ಎರಡು ಮಂತ್ರಗಳನ್ನು ಉದಿರಿಸಿ ಬಿಟ್ಟಳೆಂದರೆ ಮತ್ತೆ ನೀವೆಲ್ಲಿಯೊ, ನಿಮ್ಮ ಹಡಗೆಲ್ಲಿಯೊ? ಮರಳ ದಿಣ್ಣೆಯ ಮೇಲೆ ಸಾಗಿತೆಂದರೆ ಮತ್ತೇನು ಮಾಡುವಿರಿ? ಆ ರಕ್ಕಸಿ ತ್ರಿಶಿರೆಯನ್ನು ಕರೆದಳೆಂದರೆ ನಿಮ್ಮ ಗತಿಯೇನಾದೀತು? ಸಂಕಲೆಗಳು ಆಕೆಯ ಕೈಗಳಿಂದ ಮುರಿದು ಬೀಳವೆಂ

ಬುದು ನಿಮಗೆ ಹೇಗೆ ಗೊತ್ತು? ಹಕ್ಕಿಯು ತೇರನ್ನೇರಿ ಹೋದಳೆಂದರೆ ಬೆನ್ನ ಟ್ಟಲು ನಿಮ್ಮಿಂದ ಸಾಧ್ಯವೆ? ತಪ್ಪಿಸಿಕೊಂಡು ಹೋಗಲು ಸಾವಿರಾರು ಉಪಾ ಯುಗಳು ಆಕೆಯಲ್ಲಿ ಇಲ್ಲದಿರವು! ಆದುದರಿಂದ ಚೆನ್ನಾಗಿ ಯೋಚಿಸಿ ನೋಡಿರಿ. ನೀವೆಲ್ಲರೂ ಧೀರರು! ವೀರರು! ಪ್ರಭಾಮಂಡಲಕ್ಕೆ ತಿರುಗಿ ಹೋಗುವುದು ಕೇವಲ ಆವಶ್ಯಕವೆಂದು ಕಾಣಿಸುವುದೆ? ಏತಕ್ಕಾಗಿ ಕಡಲ ಕಡಿತಕ್ಕೆ ಬಯು ಸುವಿರಿ? ಬಿರುಗಾಳಿಯು ಬಿರುಸು ಮುರಿತು ಹೋಯಿತೆ? ಮರುಳರಂತೆ ಮರಳುವುದರಿಂದ ಆಗುವುದೇನು? ಇಲ್ಲಿಯೆ ಕಡಲ ತಡಿಯಲ್ಲಿ, ನಿಮ್ಮಂತಹ ಶೂರರಿಗೆ ಸಲುವ ಹಲವು ನಾಡುಗಳಿವೆ. ನಗರವನ್ನು ಕಟ್ಟಿಕೊಂಡು ನೆಮ್ಮದಿಯಾಗಿ ನೆಲಸಿರಿ! ಮಿತ್ರಾವಸುವು ಹೊಸ ಮಿತ್ರರನ್ನು ಆರಿಸಿಕೊಳ್ಳಲಿ!' —ಎಂದು ಉಪಾಯುವನ್ನು ಕಲ್ಪಿಸಿಕೊಟ್ಟನು.

ಆ ಜನರಿಗೆ ಈ ಮಾತು ಸರಿಯೆಂದು ಕಂಡಿತು. ಎಲ್ಲರೂ ಇದಕ್ಕೆ ಸೈಗೊಟ್ಟರು. ಅವರ ನಾಯಕನು ಮುಂದೆ ಬಂದು—'ಸುಧಾಕರ! ನೀನೆಂ ದಂತೆಯೆ ಮಾಡುವೆವಂತೆ! ಈ ಮಾಧವಿಯು ನಮ್ಮ ಪಾಲಿಗೆ ಮಾರಿಯಂತೆ ತೋರುವಳು! ತವುರನ್ನು ಸೂರೆಗೊಟ್ಟಳು! ಇನ್ನು ನಿನಗೆ ಹೆಮ್ಮಾರಿಯಾಗ ದಿರಳು! ನಿನಗಿನ್ನೂ ಬುದ್ಧಿಬಾರದು! ಇಟ್ಟುಕೋ ಆಕೆಯನ್ನು! ನಾವು ಬಡಗು ನಾಡಿಗೆ ಹೋಗುತ್ತೇವೆ'—ಎಂದು ತಮ್ಮ ಸಂಕಲ್ಪವನ್ನು ಸೂಚಿಸಿದನು.

ಆ ಮೇಲೆ ವಸುಮಿತ್ರನು ಈ ಎರಡು ತಂಡದವರಿಗೂ ಅನ್ನ, ಪಾನ, ವಸನ, ಧನ, ಧಾನ್ಯ—ಎಲ್ಲ ಕೊಟ್ಟು, ಅವರವರ ಹಾದಿಗೆ ಅವರವರನ್ನು ಕಳುಹಿಕೊಟ್ಟನು. ಪ್ರಭಾಮಂಡಲದವರು ಉಳಿವನ್ನು ಇಟ್ಟುಕೊಂಡರು! ಸುಧಾಕರನು ಅಳಿವನ್ನು ಕಟ್ಟಿಕೊಂಡನು!

---

## XII

ಯವನರು ಯಾದಸರನ್ನು ಹಿಂದಿಕ್ಕಿ ಮೂಡಲು ಹೋದರು. ಆದರೆ ಅವರ ನಡೆಗೆ ತಡೆ ಬಂತೇ ಬಂತು. ಬಿರುಗಾಳಿ ಎದ್ದಿತು. ಹಡಗು ತೆಂಕಲು ತೇಲಿಕೊಂಡು ಹೋಯಿತು. ವೀರರಾದರೂ ತೀರ ದಣಿದು ಹೋದರು. ಮಬ್ಬಿನಿಂದಲೂ ಮಳೆಯಿಂದಲೂ ಕಣ್ಣು ಕುಕ್ಕಿದಂತಾಯಿತು.

ತಾವಿರುವ ತಾವೂ ರೇವೂ ತಿಳಿಯದಂತಾಯಿತು. ಜೀವದ ಹಂಗೇ ತೊರೆಯು ವಂತಾಯಿತು! ಕೊನೆಗೆ ಬೆಳಕು ಹರಿಯುವಾಗ ಎಲ್ಲಿಯೊ ಒಂದೆಡೆ ನೆಲ ಸೇರಿ ದರು. ಆದರೇನು ಫಲ? ಆ ಮರುಭೂಮಿಯಲ್ಲಿ ಮರಳೂ ಉಪ್ಪುನೀರಿನ ಹಳ್ಳಗಳೂ ಹೇರಳವಾಗಿದ್ದುವಲ್ಲದೆ, ಮರಗಳಾಗಲಿ ನೆರಳಾಗಲಿ ತಿಳಿನೀರಾ ಗಲಿ ಎಲ್ಲೆಲ್ಲಿಯೂ ಕಾಣಿಸದು!

ಯುವನರು ಹಲವು ದಿನಗಳು ಅಲ್ಲಿ ಅತ್ತಿತ್ತ ಅಲೆದರು. ಹಸಿವಿಂ ದಲೂ ನೀರಡಿಕೆಯಿಂದಲೂ ಕಂಗೆಡುವ ಕಾಲ ಬಂತು. ಇಬ್ಬರು ವೀರರೂ ಮಡಿದು ಹೋದರು. ವ್ಯಾಗಭಾಷೆಯನ್ನರಿತಿದ್ದ ವಾಗೀಶನು, ಇತರರ ಆಗು ಹೋಗುಗಳನ್ನು ತಿಳಿದು ಹೇಳ ಬಲ್ಲವನಾಗಿದ್ದರೂ, ತನ್ನದನ್ನು ತಾನು ಕಂಡು ಕೊಳ್ಳಲಾರದೆ ಹೋದನು! ಹಿಂದಕ್ಕೆ ಯಶೋಧರನು ರಕ್ತೇಶ್ವರಿಯ ರುಂಡವ ನ್ನೆತ್ತಿಕೊಂಡು ಹೋಗುತಿದ್ದಾಗ, ಅದರಿಂದ ಉದುರಿದ್ದ ಹಾವೊಂದು ವಾಗೀಶ ನನ್ನು ಕಡಿದು ಕೊಂದು ಬಿಟ್ಟಿತು. ಆದುದರಿಂದ ವೀರರು ತುಂಬ ಚಿಂತೆಗೊ ಳಗಾದರು. ನಾವೆಯು ಮೆಲ್ಲಮೆಲ್ಲನೆ ಬಡಗು ಹಿಡಿದು ನಡೆಯುತಿತ್ತು. ಕೊನೆಗೊಂದು ಭೂರಾಶಿಯು ಕಾಣಿಸಿತು. ಅದರ ಆಕಾರವನ್ನು ಕಂಡು ಕೊಂಡು ಅದು ಶತಪುರವೆಂದು ನಿರ್ಧರಿಸಿದರು. ಅಲ್ಲಿ ಇಳಿದು, ಶತಬಲಿ ರಾಜನ ಸಂಪತ್ತನ್ನು ಕಂಡುಕೊಂಡು, ತಮ್ಮ ಹಡಗಿಗೆ ಅನ್ನನೀರುಗಳನ್ನು ತುಂಬಿಕೊಂಡು, ಮುಂದಕ್ಕೆ ಹೋಗ ಬಹುದೆಂದು ಎಲ್ಲರೂ ಹಿಗ್ಗಿದರು. ತಾರಿಣಿಯು ತೀರಕ್ಕೆ ಬಂತು. ಅಷ್ಟರಲ್ಲಿ ಪಡುಗಡೆ ಬೆಟ್ಟದ ಮೇಲೆ, ತಾಳ ದಷ್ಟು ಎತ್ತರದ ದೈತ್ಯನೊಬ್ಬನು ಕಾಣಿಸಿದನು! ಪಿತ್ತಾಳಿಯ ಮೂರ್ತಿಯಂತೆ ಮೈಯು ಹೊಳೆಯುತಿತ್ತು. ಆ ದೈತ್ಯನು ಸುತ್ತುಮುತ್ತು ನೋಡಿ, ತಾರಿಣಿ ಯನ್ನು ಕಂಡು, ಹಳ್ಳತಿಟ್ಟುಗಳನ್ನು ಹಾರಿಕೊಂಡು ಕುದುರೆಯಂತೆ ವೇಗವಾಗಿ ಬಂದನು. ಕೈಗಳನ್ನು ಅತ್ತಿತ್ತ ಬೀಸಿಕೊಂಡು—'ಕಡಲ ಕಳ್ಳರಿಗೆ ಇಲ್ಲಿ ಎಡೆ ಯಿಲ್ಲ! ನಡೆಯಿರಿ! ನಡೆಯಿರಿ! ತದಿಗೆ ಬಂದರೆ ಮಡಿಯುವಿರಿ!'—ಎಂದು ಕೊಂಬಿನಂತೆ ಕೂಗಿದನು.

ಆಗ ಯುವನರು—'ಅಲ್ಲ, ಅಲ್ಲ. ನಾವು ಕಳ್ಳರಲ್ಲ. ಸಾಧುಗಳು, ಸತ್ಯವಂತರು. ನಮಗೆ ಅನ್ನ ನೀರು ಬೇಕು. ಮತ್ತೇನೂ ಬೇಡ!'—ಎಂದು ಹೇಳಿದರು.

'ಸುಳ್ಳು! ಸುಳ್ಳು! ನೀವು ಕಳ್ಳರು! ನನಗೆ ಗೊತ್ತು! ಇಲ್ಲಿ ಕಾಲಿಟ್ಟರೆ ಸಾಯುವಿರಿ!'—ಎಂದು ಹೇಳಿ ಆ ದೈತ್ಯನು ಮತ್ತೊಂದು ಸಲ ಕೈಸನ್ನೆ ಮಾಡಿ, ಎತ್ತಲೋ ಓಡಿ ಹೋದನು. ಹತ್ತಿರವಿದ್ದ ಕುರುಬರು ಮಂದೆಯನ್ನು ಮನೆಯ ಕಡೆ ಹೊಡೆಯ ಹತ್ತಿದರು. ಬೆಟ್ಟಗಳ ನಡುವೆ ಬೆಂಕಿಯಿದ್ದಿತು. ಇದೇನು ವಿಚಿತ್ರವೆಂದು ತಿಳಿಯಲಾರದೆ ವೀರರು ಮಂಕುಹಿಡಿದು ಕುಳಿತುಕೊಂಡು ಬಿಟ್ಟರು.

ಇದೆಲ್ಲವನ್ನೂ ನೋಡುತ್ತ ನಿಂತಿದ್ದ ಮಾಧವಿಯು ಮುಂದೆ ಬಂದು— 'ಮಿತ್ರರಿರಾ! ದೈತ್ಯನಾರೆಂದು ನಾನು ಬಲ್ಲೆ. ವಿಶ್ವಕರ್ಮನು ಹಿತ್ತಾಳಿಯ ಈ ಮೂರ್ತಿಯನ್ನು ನಿರ್ಮಿಸಿ, ಇದರೊಳಗೆ ಜೀವಕಳೆಯನ್ನು ತುಂಬಿ, ಇದನ್ನು ಶತಬಲಿಗೆ ಒಪ್ಪಿಸಿರುವನು. ಈತನೇ ಶತಪುರದ ಕಾವಲಿನವನು. ಹಗಲಿರುಳೆನ್ನದೆ ಈ ದೈತ್ಯನು ದಿನಕ್ಕೆ ಮೂರಾವೃತ್ತಿ ಈ ದ್ವೀಪದ ಸುತ್ತಲೂ ಸಂಚರಿಸುತ್ತಾನೆ. ಹೊಸಬರು ಯಾರಾದರೂ ಬಂದರೆಂದರೆ, ಬೆಂಕಿಯ ನಡುವೆ ಹಾರಿ ಮೈಯನ್ನು ಕಾಸಿಕೊಂಡು ಬಂದು, ಅರಿಗಳನ್ನು ಬೆರಸಿಬಿಡು ತ್ತಾನೆ!'—ಎಂದು ಆತನ ಕತೆಯನ್ನು ವಿವರಿಸಿದಳು.

ಮಾಂಸಮಜ್ಜಗಳಿಂದ ಪೂರಿತವಾದ ದೇಹಿಗಳು ಯಾರು ಬಂದರೂ ಯವನ ವೀರರು ಇದಿರಿಸ ಬಲ್ಲರು. ಆದರೆ ಕೆಂಪಗೆ ಕಾದ ಈ ಹಿತ್ತಾಳಿಯನ್ನು ಇದಿರಿಸುವ ಬಗೆ ಹೇಗೆ? ನೀರಂತೂ ತಮಗೆ ಕೇವಲ ಆವಶ್ಯಕ. ಆದುದರಿಂದ ಏನು ಮಾಡುವುದಕ್ಕೂ ತೋಚದೆ ಆ ಮಾಯಾವಿನಿಯನ್ನೆ ಮರೆಹೊಕ್ಕರು. 'ಅಮ್ಮಾ! ನೀನು ಬಲು ಜಾಣೆ! ಈ ಕಂಟಕದಲ್ಲಿ ಸಲಹೆಗೊಟ್ಟು ನಮ್ಮನ್ನು ಸಲಹು!'—ಎಂದು ಕೇಳಿಕೊಂಡರು.

ಆಗಲಾ ಮಾಧವಿಯು— 'ಬಂಧುಗಳಿರಾ! ಕೇಳಿಕೆಯ ಮಾತು—ಸಟೆ ಯಲ್ಲದಿದ್ದರೆ ಈ ಹಿತ್ತಾಳಿಯನ್ನು ಇದಿರಿಸ ಬಲ್ಲೆನು. ಈತನ ದೇಹದೊಳ ಗೊಂದು ನಾಳವಿರುವುದಂತೆ. ಅದರೊಳಗೆ ಬೆಂಕಿಯ ರಸವು ತುಂಬಿರು ವುದಂತೆ. ಆ ನಾಳದ ಬಾಯಿಯು ತಿರುಗಣೆಯಿಂದ ಮುಚ್ಚಿಕೊಂಡಿ ರುವುದಂತೆ. ಆ ತಿರುಗಣೆಯು ಮಾತ್ರ ಸಿಕ್ಕಿ ಬಿಟ್ಟಿತೆಂದರೆ ನಾವು ಮತ್ತೆ ನೆಮ್ಮದಿಯಾಗಿ ಹೋಗ ಬಹುದು!'—ಎಂದು ತನ್ನ ಅರಿವನ್ನು ತಿಳುಹಿದಳು.

ಆ ಮೇಲೆ ಆಕೆಯು ಹೇಳಿಕೆಯಂತೆ—ಗಂಡಸರಾದ ತಾವು ಹೆಂಗುಸಾದ ಆಕೆಯನ್ನು—ತೀರಕ್ಕೆ ಇಳಿಸಿಯೆ ಬಂದರು. ಅಷ್ಟರಲ್ಲಿ ದೈತ್ಯನು ಬೆಂಕಿಯನ್ನು ಕಾರುತ್ತ ಓಡಿಕೊಂಡು ಬಂದನು. ಹುಲ್ಲು ಕರಚಿಕೊಂಡಿತು! ಕಲ್ಲು ಬಿರಿಕುಗೊಂಡಿತು! ಮಾಧವಿಯನ್ನು ಕಾಣುತ್ತಲೆ ಆತನು ತಟ್ಟನೆ ನಿಂತನು. ಮಾಧವಿಯು ಏನೂ ಅಂಜಿಕೆ ತೋರದೆ ತನ್ನ ಮಾಯಾಮಂತ್ರವನ್ನು ಜಪಿಸ ತೊಡಗಿದಳು.

'ಜರೆಯು ನೀಗಲು ನೆರೆವನಾವನೊ ಮರಣ ಬಾರದೆ ದೂರದೆ ।
ಮರುಗಲೇತಕೆ ಕೊರಗಲೇತಕೆ ಹರೆಯದೆರಕದ ನೀರಿದೆ ॥
ಜರೆಯು ತೋರದು ನರೆಯು ಬಾರದು ನೀರಿನಾ ಪರಿ ನೋಡಿರೇ ।
ನೀರ ಬೊಬ್ಬುಳಿ ತೋರಿ ತೋರದು ಜೀವಮಾನದ ಮಾನವೆ ॥'

ದೈತ್ಯನು ಬೆರಗಾಗಿ—'ಯಾರವ್ವಾ ನೀನು? ಅಂತಹ ಹರೆಯದ ರಸವು ಯಾವಲ್ಲಿದೆ?' ಎಂದು ಕೇಳಿದನು.

ಮಾಧವಿಯು ತಾನು ಬಚ್ಚಿಟ್ಟುಕೊಂಡಿದ್ದ ಗಿಂದಲನ್ನು ತೋರಿಸಿ—'ಇದರೊಳಗಿದೆ! ನಾನು ಯಾರೆಂದು ತಿಳಿದಿರುವೆ? ಹೆಸರುಗೊಂಡ ಮಾಯಾವಿನಿ ಮಾಧವಿಯೆಂದರೆ ನಾನೇ! ಸಾವಿತ್ರಿಯು ನನಗೆ ಅಕ್ಕನಾಗ ಬೇಕು. ಆಕೆಯು ನಿನ್ನ ಸುದ್ದಿಯೆಲ್ಲವನ್ನೂ ಚೆನ್ನಾಗಿ ಬಲ್ಲಳು. ನಿನ್ನ ಹೆಸರು ಎಲ್ಲ ಕಡೆಗೂ ಹರಡಿದೆ! ನಿನ್ನಂತಹ ನಂಬುಗೆಯ ಸೇವಕನು ಜರೆಯಿಂದ ಕೊರಗಬಾರದೆಂದು, ಈ ಹರೆಯದ ರಸವನ್ನು ನಿನ್ನ ನಾಳದೊಳಕ್ಕೆ ಸುರಿಯುವಂತೆ ಅಕ್ಕಯ್ಯನು ಹೇಳಿರುವಳು! ಇದೊ! ನಾನೀ ರಸವನ್ನು ಸುರಿಯುವೆನಂತೆ! ಮತ್ತೆ ನೀನು ಯಾವಾಗಲೂ ಎಳವೆಯಲ್ಲೆ ಬಾಳ ಬಹುದು!' ಎಂದು ಕಪಟದ ಮಾತನ್ನಾಡಿದಳು.

ಸರಳತನದ ಆ ದೈತ್ಯನು ಈಕೆಯ ಮಾತಿಗೆ ಮರುಳಾಗಿ ಹತ್ತಿರಕ್ಕೆ ಬಂದನು. 'ಅಬ್ಬಬ್ಬಾ! ಎಷ್ಟು ಬಿಸಿ! ಏನು ಕಾವು! ನನ್ನೀ ಬೆರಳುಗಳು ಬೆಂದು ಹೋದಾವು! ಕಡಲೊಳಕ್ಕೆ ಹಾರಿ, ನಿನ್ನೀ ದೇಹವನ್ನು ತಂಪು ಮಾಡಿಕೊ! ಮತ್ತೆ ನಾನು ಈ ರಸವನ್ನು ಸುರಿಯುವೆನಂತೆ!'—ಎಂದು ಉಪದೇಶಿಸಿದಳು. ಆ ದೈತ್ಯನು ಹಾಗೆಯೆ ಮಾಡಿದನು. ಮಾಧವಿಯ ಬಳಿ ಕುಳಿತುಕೊಂಡು, ತನ್ನ ಜೀವದ ಮರ್ಮವನ್ನು ತೋರಿಕೊಟ್ಟನು! ಮಾಧವಿಯು

ರಸವನ್ನು ಸುರಿಯುವವಳಂತೆ ನಟಿಸುತ್ತ, ಆ ತಿರುಗಣೆಯನ್ನು ತಿರುಗಿಸಿ ಬಿಟ್ಟಳು. ಆ ಜೀವನಾಳದಿಂದ ಬೆಂಕಿಯು ದ್ರವರೂಪವಾಗಿ ಒಂದೇ ಸವನೆ ಹರಿಯಲಾರಂಭಿಸಿತು! ದೈತ್ಯನು ತಟ್ಟನೆ ಅಲ್ಲಿಂದ ಹಾರಲು ಯತ್ನಿಸಿದನು. ಆದರೆ ಮಾಧವಿಯ ತಂತ್ರವು ತಡೆದು ಬಿಟ್ಟಿತು. ಚಿತ್ತಾಳಿಯು ಬೆಟ್ಟದಂತೆ ಅಲ್ಲಿಯೆ ಒರಗಿದನು. ಬೆಂಕಿಯು ಕಡಲಿಗೆ ಇಳಿದುಕೊಂಡು ಹೋಗು ತಲಿತ್ತು. ವೀರರು ನಗುತ್ತ ತಡಿಗೆ ಬಂದು, ನೀರು ತುಂಬಿಕೊಂಡು ಮುಂದೆ ಸಾಗಿದರು.

---

ಆ ಮೇಲೆ ಸೋಜಿಗದ ಮೇಲೆ ಸೋಜಿಗವನ್ನು ಕಂಡುಕೊಂಡು, ಕೊನೆಗೊಂದು ಭೂಶಿಖರಕ್ಕೆ ಬಂದಿಳಿದರು. ಅಲ್ಲಿ ದೇವತೆಗಳಿಗೆ ಬಲಿಯನ್ನರ್ಪಿಸಿದರು. ಗೀತಾಧರನು ಮೊಳೆ ಹೋಗುವಂತೆ ಮಾಡಿದನು. ಇಂತು ನಿರ್ಮಲರಾದ ವೀರರು ಹಲವು ಹರದಾರಿ ಬಡಗಲು ಸಾಗಿದರು. ಕೊನೆಗೆ ಗಂಧರ್ವಗಿರಿಯು ಕಾಣಿಸಿತು. ಇಳಾವರ್ತಕ್ಕೆ ಬಂದಿಳಿದರು. ತಾರಿಣಿಯನ್ನು ತೀರಕ್ಕೆ ಎಳೆದಿರಿಸುವಷ್ಟು ತ್ರಾಣ ಕೂಡ ಅವರಲ್ಲಿರಲಿಲ್ಲ! ಮರಳ ಮೇಲೆ ಮಲಗಿಕೊಂಡು ಮರುಗಿದರು. ಈಗಳಿನ ಇಳಾವರ್ತದ ಮನೆಗಳಾಗಲಿ ಮರಗಳಾಗಲಿ ಮೊದಲಿನವಲ್ಲ! ಜನರೆಲ್ಲರೂ ತೀರ ಹೊಸಬರಾಗಿ ಕಾಣಿಸಿದರು! ಎಳವೆಯನ್ನೂ ಗೆಳೆಯರನ್ನೂ ತೊಳಲಿಕೆಯನ್ನೂ ಎಣಿಸಿಕೊಂಡು ಮನ್ಮಲ ಮರುಗಿದರು. ಮನೆಸೇರಿದ ಸಂತಸವು ಈ ಅಳಲೊಂದಿಗೆ ಅಡಗಿಹೋಯಿತು. ಜನರು ಗುಂಪುನೇರಿ ಕುತೂಹಲದಿಂದ—'ಯಾರಯ್ಯಾ ನೀವು, ಇಲ್ಲಿ ಅಳುತ್ತಿರುವಿರಿ?' —ಎಂದು ಕೇಳಿದರು.

ನಮ್ಮ ಹಾಡನ್ನೇನೆಂದು ಹೇಳಲಿ? ಹಲವು ಕಾಲಕ್ಕೆ ಹಿಂದೆ, ಹೊಂದೊವಲಿನ ನೆವ ಹಿಡಿದು, ಇಲ್ಲಿಂದ ಕೆಲವರು ಅರಸುಮಕ್ಕಳು ಹಡಗು ಹತ್ತಿ ಹೋಗಿರಲಿಲ್ಲವೆ? ಅವರಲ್ಲಿ ಉಳಿದುಳಿದವರೇ ನಾವು. ಹೊಂದೊವಲನ್ನು ತಂದಿರುವೆವು. ಆದರೇನು? ಅದರೊಂದಿಗೆ ಗೋಳೂ ಬಂದಿರುವುದು! ಅಣ್ಣಗಳಿರಾ! ನಮ್ಮನ್ನು ಹೆತ್ತು ಹೊತ್ತವರು ಯಾರಾದರೂ ಬದುಕಿಕೊಂಡಿರುವರೆ? ಅವರ ಸುದ್ದಿಯನ್ನು ಕೊಂಚ ಹೇಳಿರಿ ನೋಡೋಣ!'—ಎಂದು ಕೇಳಿದರು.

ಆಕ್ಷಣವೆ ಒಂದೆಡೆ ನಗುವೂ, ಒಂದೆಡೆ ಅಳುವೂ ಕೇಳಿಸ ತೊಡಗಿತು. ನಗರದಿಂದ ಜನರು ಸಾಲುಗಟ್ಟಿಕೊಂಡು ಬಂದರು. ಬಂಧುಬಳಗದವರು ಉಳಿದು ಬಂದವರಿಗಾಗಿ ನಲಿದಾಡಿದರು. ಅಳಿದು ಹೋದವರಿಗಾಗಿ ಗೋಳಾಡಿದರು. ಎಲ್ಲರೂ ಅವರವರ ಮನೆಗಳಿಗೆ ಹೊರಟು ಹೋದರು.

ಸುಧಾಕರನು ಮಾಧವಿಯನ್ನು ಕರೆದುಕೊಂಡು, ಕಕ್ಕಯ್ಯನಾದ ಸೈಂಧವ ರಾಜನ ಬಳಿಗೆ ನಡೆದನು. ಸೈಂಧವನು ಮುಪ್ಪಿನಿಂದ ತೀರ ಹಣ್ಣಾಗಿ, ಒಂದೆಡೆ ಮುದುಡಿಕೊಂಡು ಕುಳಿತಿದ್ದನು. ಕೈಕಾಲುಗಳು ಕೊಕ್ಕರಿಸಿಕೊಂಡಿದ್ದವು. ಕಣ್ಣಿಗೆ ಕುರುಡು ಕವಿದಿತ್ತು. ಆತನ ಇದಿರಲ್ಲಿ ಸುಧಾಕರನ ತಂದೆಯಾದ ರತ್ನಾಕರನು ಕುಳಿತಿದ್ದನು. ಈತನ ಅವಸ್ಥೆಯೂ ತೀರ ಕೆಟ್ಟಿತ್ತು. ಆ ಇಬ್ಬರ ತಲೆಗಳೂ ಆಡುತಿದ್ದವು.

ಸುಧಾಕರನು ತಂದೆಯ ಅಡಿಗೆರಗಿ, 'ಹೆಸರಿತ್ತು ಕರೆದನು. ತನ್ನ ಪರಿಚಯವನ್ನು ಹೇಳಿಕೊಂಡನು. ಹಳೆಬನು ಕೈನೀಡಿ ತಡವರಿಸಿ—'ಎಳೆಯ! ಅಲ್ಲ ಅಲ್ಲ! ನನ್ನ ಸುಧಾಕರನು ಅಂದೇ ಕಡಲಲ್ಲಿ ಮುಳುಗಿರುವನು!'— ಎಂದೆಂದುಕೊಂಡು ನಿರಾಶನಾದನು.

ಸುಧಾಕರನು—'ಇಲ್ಲ ಇಲ್ಲ! ನಾನೇ ಆ ಸುಧಾಕರನು. ನೀನು ಯಾವನನ್ನು ಗಂಧರ್ವಗಿರಿಗೆ ಕರೆದುಕೊಂಡು ಹೋಗಿ, ಅಶ್ವಪತಿಯ ಬಳಿ ಬಿಟ್ಟು ಬಂದೆಯೊ ಆ ಸುಧಾಕರನೇ ನಾನು! ಹೊಂದಾವರೆಯ ಹೂವಲನ್ನೂ ತಂದಿರುವೆನು. ಆದಿತ್ಯನ ಬಳಿಯ ವಧುವನ್ನೂ ತಂದಿರುವೆನು. ಆದುದರಿಂದ ನನ್ನ ಮಾತು ಇಂದಿಗೆ ಸಂದಿತು. ಈಗ—ಕಕ್ಕಯ್ಯ! ದೊರೆತನವನ್ನು ಬಿಟ್ಟುಕೊಡು! ನಿನ್ನ ಮಾತು ಸಲ್ಲಲಿ!' ಎಂದು ಹೇಳಿದನು.

ಸೈಂಧವನು ಸಂತೋಷದಿಂದ ರಾಜ್ಯವನ್ನು ಸುಧಾಕರನಿಗೆ ಬಿಟ್ಟುಕೊಟ್ಟನು. ಸುಧಾಕರನು ಮಾಧವಿಯೊಂದಿಗೆ ಕೆಲವು ಕಾಲ ನೆಮ್ಮದಿಯಾಗಿ ಆಳಿಕೊಂಡಿದ್ದನು.

ಮಾಧವಿಯು ಮಾತ್ರ ತನ್ನಲ್ಲಿ ಬೇರೂರಿದ್ದ ದುಷ್ಟ ಸ್ವಭಾವವನ್ನು ಬಿಡಲಾರದೆ ಹೋದಳು, ಮುದುಕನಾದ ಸೈಂಧವನಿಗೆ ಕೇಡು ಬಗೆದಳು. ಒಂದು ದಿನ ಸೈಂಧವನ ಮಕ್ಕಳಿದಿರಲ್ಲಿ—'ಹಳೆಯದನ್ನು ಎಳೆಯದಾಗಿ ಮಾಡಬಲ್ಲೆನು'—ಎಂದು ಹೇಳುತ್ತ, ಮುದಿ ಟಗರೊಂದನ್ನು ಕೊಂದು, ಕೊಪ್ಪರಿಗೆಯೊಳ

ಗಿಟ್ಟು, ... ... ... ...ಪ್ಪ ಒಗೆದು ... ...ಲಕೆಗಳನ್ನು ... ಕುದಿಸಿ ವ
ತ್ರಿಸಿದಳು. ಕೂಡಲೆ ಕುರಿಮರಿಯೊಂದು ಅದರೊಳಗಿಂದ ಚಿಗಿದುಕೊಂ
ಬಂತು! ಮುದುಕನಾದ ಸೈಂಧವನನ್ನು ಕೂಡ ಈ ರೀತಿ ಮಾರ್ಪಡಿಸಬ
ದೆಂದು ಆ ಮಕ್ಕಳಿಗೆ ಉಪದೇಶಿಸಿದಳು. ಅವರು ಇವಳ ಮಾತನ್ನು ನ
ಕೊಂಡು, ತಂದೆಯನ್ನ ಕೊಂದು ಕೆಡವಿದರು! ಆ ದೇಹವು ಅಲ್ಲಿಯೆ ಕೆ
ಯಿತಲ್ಲದೆ ಅಭಿನವ ಸೈಂಧವನೇನೂ ಹೊರಟುಬರಲಿಲ್ಲ! ಯಾಕೆಂದರೆ ಮಾ
ವಿಯು ಮಂತ್ರದ ಗುಟ್ಟನ್ನು ಬಯಲು ಮಾಡಿರಲಿಲ್ಲ. ಇದರಿಂದ ಎಲ್ಲರಿ
ಮನ ನೊಂದಿತು.

ಸುಧಾಕರನಿಗೆ ಕೂಡ ಆಕೆಯು ಈ ಕಠೋರ ವೃತ್ತಿಯು ಸರಿ ಬ
ಲಿಲ್ಲ. ಆಕೆಯ ಮೇಲಣ ಪ್ರೇಮವು ಕುಂದುತ್ತ ಬಂತು. ಕೊನೆಕೊ
ಆಕೆಯನ್ನು ಕಂಡರೆ ಕ... ಆಗುತಿದ್ದಿಲ್ಲ! ಮಾಧವಿಯು ತನ್ನ ಮಂತ್ರ
ದಿಂದ ಆತನಿಗೆ ಪರಿಪರಿಯ ಸಂಕಟಗಳು ಬರುವಂತೆ ಮಾಡಿ, ಕೊನೆಗೆ ತಾ
ತನ್ನ ಅಂಚೆದೇರನ್ನೇರಿಕೊಂಡು ಎಲ್ಲಿಯೋ ಹೋಗಿಬಿಟ್ಟಳಂತೆ!

ಸುಧಾಕರನು ಜಾಣನೇ ನಿಜ! ಧೀರನೇ ದಿಟ! ಪ್ರತ್ಯಕ್ಷ ಸುಧಾಕರ
ಆದರೆ ಆತನ ಗತಿಯೇನಾಯಿತು? ಹೊಲಸಿಯಾದ ಮಾಧವಿಯು ನೆರವ
ಬಯಸಿದನಾದುದರಿಂದ, ಆತನಿಗೆ ಈ ದುರ್ಗತಿಯು ಬಂತು! ಹುಲಿಗೆ ಹ
ರೆದು ಸಲಹಿದರೂ ಅದು ಎಂದೂ ಹಸುವಾಗದು!

